# ಸತೀಸಾಹಸ.



ಲೇಖಕ:—

ಕೈ. ವಾ. ಶ್ರೀಕಂಠಶಾಸ್ತ್ರೀ.

[೫ನೇಆವೃತ್ತಿ.]

೧೯೩೦

ಬೆಲೆ ೪ ಆಣೆ.

# ಪ್ರಸ್ತಾವನೆ

ಈ ಚರಾಚರಾತ್ಮಕವಾದ ಜಗತ್ತೆಲ್ಲವೂ ವಿಚಿತ್ರವಾದದ್ದೆಂಬದು ಎಲ್ಲರಿಗೂ ತಿಳಿದ ವಿಷಯವಲ್ಲವೆ? ಆಧುನಿಕರಾದ ನಾವು ನಮ್ಮ ಬುದ್ಧಿ ಚಾತುರ್ಯವನ್ನು ಹೆಚ್ಚು ಮಾಡಿಕೊಳ್ಳಲಿಕ್ಕೆ ಎಷ್ಟೋ ಸರ್ವ ವಸ್ತು ಪ್ರದರ್ಶನ ಶಾಲೆಗಳಿಗೆ ಪ್ರವೇಶಿಸಿ, ಅಲ್ಲಿ ಸೇರಿದ ಪದಾರ್ಥಗಳ ಗುಣಗಳನ್ನು ನಮ್ಮ ಬುದ್ಧಿಯ ಶಕ್ತಿಯನ್ನನುಸರಿಸಿ ಹ್ಯಾಗೆ ತಿಳಿಯುವೆವೋ, ಹಾಗೆಯೇ ಪಶುಪ್ರಾಯರಾದ ನಾವೆಲ್ಲರೂ ಸದ್ಗುಣಗಳನ್ನು ಸಂಗ್ರಹಿಸಿ, ದುರ್ಗುಣಗಳನ್ನು ದೂರಮಾಡಿ ಕೃತಾರ್ಥರಾಗಲೆಂಬ ವಾತ್ಸಲ್ಯದಿಂದ ಶ್ರೀ ಭಗವಂತನು ಶಕ್ತಿಯಿಂದ ವಿಪರೀತವಾದ ಪ್ರಪಂಚವನ್ನೇ ವ್ಯಷ್ಟಿಗ ದೃಷ್ಟಿಗೆ ಬೀಳುವಂತೆ ಮಾಡಿರುವನು. ಇಂಥ ಪ್ರಪಂಚದಲ್ಲಿರುವ ಉಚ್ಚ-ನೀಚ ಪದಾರ್ಥಗಳೆಲ್ಲವೂ ನಮಗೆ ಬುದ್ಧಿಪ್ರದಗಳೆಂದೇ ಹೇಳಬೇಕು.

ದುಃಖವೆಂಬ ವೃಕ್ಷಕ್ಕೆ ಇಚ್ಛೆಯೇ ಬೀಜವೆಂದೂ, ಆ ಇಚ್ಛೆಯನ್ನು ಬಿಟ್ಟವನೇ ಸುಖವಂತನೆಂದೂ ಮಹನೀಯರು ಉಪದೇಶಿಸುವರು. ಇದೇ ಅಭಿಪ್ರಾಯವೇ "ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ" ಎಂಬ ಗೀತಾ ವಚನದಿಂದ ಸ್ಪಷ್ಟವಾಗುವದು. ಆಶೆಯು ಪರ ಸತೀ ಸುತ ದ್ರವ್ಯಗಳು ಮೊದಲಾದವುಗಳಲ್ಲಿ ಹುಟ್ಟುವದು; ಆದರಿಂದ ಮನುಷ್ಯನಿಗೆ ಬುದ್ಧಿ ನಾಶವಾಗುವದಲ್ಲದೆ, ತಾನೇ ಹಾಳಾಗುವನು. ಅಂಥವರಲ್ಲಿ ಈ ಗೋವಿಂದಾಚಾರಿಯೂ ಸೇರಿದವನಲ್ಲವೆ? ಇವನ ದುರಾಶೆಯನ್ನು ನೋಡಿದಿರಾ!!! ತನ್ನ ಮಗಳನ್ನಾದರೂ ಮಾರಿ ದ್ರವ್ಯ ಸಂಪಾದಿಸಬೇಕೆಂದು ಅವನು ಇಚ್ಛಿಸುವನಲ್ಲ! ಆಶೆಯ ಮಹಿಮೆಯನ್ನು ನೋಡಿರಿ, ಎಷ್ಟು ಬಲವಾಗಿರುವದು! ಇದರಂತೆ ಗುಲಾಂಖಾನನಿಗೆ ಹುಟ್ಟಿದ ಸ್ತ್ರೀಲೋಲುಪತೆಯೂ ಇದನ್ನು ಮೀರಿದ್ದೇ ಅಲ್ಲವೇ? ಕಷ್ಟಕಾಲದಲ್ಲಾದರೂ ತನ್ನ ಧರ್ಮವನ್ನೂ, ಪತಿ ಭಕ್ತಿಯನ್ನೂ ಬಿಡದೆ ಕಾರ್ಯಸಾಧನೆ ಮಾಡಿದ ಪತಿವ್ರತೆಯಾದ ಸೀತಾಂಬೆಯ ಗುಣಗಳೂ, ದೊಡ್ಡ ವಿಪತ್ತನ್ನು ಹೊಂದಿ ಅನಾಥಳಾದ ಆ ಅಬಲೆಯ ವಿಷಯದಲ್ಲಿ ವೈಶ್ಯಶ್ರೇಷ್ಠನು ತೋರಿಸಿದ ಪ್ರಾಣಿದಯೆಯೂ ಶ್ಲಾಘನೀಯಗಳಾಗಿವೆ.

ಈ ರೀತಿಯಾಗಿ ಪ್ರಪಂಚದ ನಡವಳಿಕೆಗಳಿಂದ ಸುಗುಣಗಳನ್ನೂ, ಅವಗುಣಗಳನ್ನೂ ವಿವೇಚಿಸುತ್ತ, ಸದ್ಗುಣಗಳನ್ನು ಗ್ರಹಣಮಾಡಿ, ದುರ್ಗುಣಗಳನ್ನು ಬಿಡುತ್ತ ಸತ್ಸಹವಾಸದಿಂದ ಕೃತಾರ್ಥರಾಗಬೇಕು.

ಆನಂದವನ, ತಾ|| ೧೧-೮-೧೯೧೦ — ಶ್ರೀಕಂಠಶಾಸ್ತ್ರೀ.

# ಸತೀಸಾಹಸ.

೧ನೆಯ ಪ್ರಕರಣ.



## ವಿವಾಹ.



ಮಹೀಮಂಡಲಕ್ಕೆ ಅಲಂಕಾರಭೂತವೂ, ಬಹು ದೇಶದ ಜನಗಳಿಂದ ನಿಬಿಡವೂ, ಸಕಲ ಚಾತುರ್ವರ್ಣದ ಜನರು ಮನೆ ಮಾಡಿದ ಪರಾಹಿತ್ಯ ಕ್ರಿಯೆಯಿಂದ ಮಹಾ ಪಟ್ಟಣವೊಂದು ಇತ್ತು. ಅಲ್ಲಿಯ ರಾಜಬೀದಿಯ ಚಂದವೂ, ವಿದ್ಯುಜ್ಜ್ಯೋತಿಗಳ ಅಂದವೂ, ಜನಗಳ ತರಂಗವೂ ನೋಡಲು ಅಪದಳವಾಗಿದ್ದವು. ಇಂಥ ಪುಣ್ಯ ನಗರದಲ್ಲಿ ಶಂಕರಾಚಾರ್ಯ ವರಪುತ್ರರೂ, ಸುಗುಣ ನಿಧಿಗಳೂ ಆದ ವಿಷ್ಣುಗುಪ್ತರೆಂಬ ಬ್ರಾಹ್ಮಣಶ್ರೇಷ್ಠರು ಸಕುಟುಂಬ ವಾಸವಾಗಿದ್ದರು. ಇವರಿಗೆ ಏಕಸ್ವಭಾವದ ಗೋವಿಂದನೆಂಬ ಒಬ್ಬ ತಮ್ಮನಿದ್ದನು. ಇವರು ವಿರವೈಷ್ಣವರು; ಸದಾಚಾರ ಸಂಪನ್ನರು; ಇದರ ಮೇಲೂ ಬಹು ಜನರಿಗಾಶ್ರಯರು. ಮನೆಯಲ್ಲಿ ತಾವು, ತಮ್ಮ ಹೆಂಡತಿ, ಆ ತಮ್ಮನೆಂಬ ಪುಣ್ಯಪುರುಷ; ಹೀಗೆ ಮೂರೇ ಜನರಿದ್ದರು. ಹೆಂಡತಿಯು ತುಂಬಾ ಜಾಣತನದಿಂದ ಸಂಸಾರಮಾಡಿಕೊಂಡು ಹೋಗುತ್ತಿದ್ದಳು. ಆದರಿಂದ ಕೆಲವು ಕಾಲಗಳಲ್ಲಿಯೇ ಯಾವ ತಾಪವೂ ಇಲ್ಲದೆ ಅವರು ಸ್ವಲ್ಪ ಪುಷ್ಟರಾದರು.

ವಿಷ್ಣುಗುಪ್ತರಿಗೆ ಬಹುಕಾಲಗಳ ವರೆಗೂ ಮಕ್ಕಳೇ ಇದ್ದಿಲ್ಲ. ದೈವಾನುಗ್ರಹದಿಂದ ಇವರ ನಾಲ್ವತ್ತು ವರ್ಷಗಳಿಗೆ ಹೆಣ್ಣು ಮಗು ವೊಂದು ಜನಿಸಿತು. ದಂಪತಿಗಳಿಗೆ ಬಹು ಸಂತೋಷ. ಹೇಳುವದೇನು? ಬಡವನಿಗೆ ಐಶ್ವರ್ಯ ಬಂದಂತೆ, ಕುರುಡನಿಗೆ ಕಣ್ಣು ಬಂದಂತೆ ಆಯಿತು. ಅನಂತರ ನಾಮಕರಣಾದಿ ಕ್ರಿಯೆಗಳನ್ನು ನೆರವೇರಿಸಿ, ಆ ಮಗುವಿಗೆ ಸೀತೆಯೆಂಬ ಹೆಸರನ್ನಿಟ್ಟರು. ಒಂದೇ ಮಗುವಾದ್ದರಿಂದ ತಂದೆ-ತಾಯಿ ಗಳು ಅದಕ್ಕೆ ಚಿಕ್ಕ ಚಿಕ್ಕ ಚಿನ್ನದ ಒಡವೆಗಳನ್ನೂ, ಒಳ್ಳೆಯ ಒಟ್ಟೆಗಳನ್ನೂ ಹಾಕಿ ಸಂತೋಷಿಸುತ್ತಿದ್ದರು. ಆ ಮಗುವಿನ ಚಿಕ್ಕಪ್ಪನಾದ ಗೋವಿಂ ದನು, ಇಷ್ಟರೊಳಗೇ ಇಸ್ಪೀಟು-ಗಂಜೀಫು ಮೊದಲಾದ ಕುಶಲ ವಿದ್ಯೆಗ ಳಲ್ಲಿ ಪಂಡಿತನಾಗಿದ್ದನು.

ಒಂದು ದಿನ ಆ ಚಿಕ್ಕಪ್ಪನು ಮಗುವನ್ನು ಆಡಿಸುವದಕ್ಕಾಗಿ ಬೀದಿಗೆ ಕರೆತಂದನು. ಸ್ವಲ್ಪ ಹೊತ್ತು ಮಗುವನ್ನೆತ್ತಿಕೊಂಡಿದ್ದು, ಆ ಹುಡು ಗಿಯ ಟೊಂಕಕ್ಕೆ ಕಟ್ಟಿದ್ದ ಗೆಜ್ಜೆಯ ಸರವನ್ನು ಬಿಚ್ಚಿಕೊಂಡು ಮಗು ವನ್ನು ಮನೆಯ ಬಾಗಿಲಲ್ಲಿ ಇಳಿಸಿ ಯಾರಿಗೂ ತಿಳಿಯದಂತೆ ಜೂಜಾಡುವ ಮನೆಗೆ ಪಯಣಮಾಡಿಸಿದನು. ಅಲ್ಲಿ ಆ ಸರವನ್ನು ಮಾರಿ ಜೂಜಿಗೆ ಪ್ರಾರಂಭಮಾಡಿದನು!

ಮನೆಯಲ್ಲಿ ಮಗುವಿನ ಗೆಜ್ಜೆಯ ಸರವನ್ನು ಕಾಣದೆ, ತಾಯಿಯು ತುಂಬಾ ಪೇಚಾಡಲಾರಂಭಿಸಿದಳು. ಅಷ್ಟರೊಳಗೆ ವಿಷ್ಣುಗುಪ್ತರೂ ಮನೆಗೆ ಬಂದರು. ಯೋಚಿಸುತ್ತಿದ್ದ ಹೆಂಡತಿಯನ್ನು ನೋಡಿ, ಕಾರಣ ವೇನೆಂದು ಕೇಳಲು, ಆಕೆಯು ನಡೆದ ವೃತ್ತಾಂತವನ್ನೆಲ್ಲ ಪತಿಗೆ ತಿಳಿಸಿ ದಳು. ಆ ಮಹನೀಯರು ಯೋಚಿಸಿ, ಯಾವ ವಿಷಯವೂ ತಿಳಿಯದೆ, ಕಳವಳಿಸತೊಡಗಿದರು. ಅಷ್ಟರಲ್ಲೇ ಕೈಯಲ್ಲಿದ್ದದ್ದನ್ನೆಲ್ಲ ಸೋತು ಮುಖಕ್ಕೆ ಮುಸಿಹಚ್ಚಿಕೊಂಡು ಬರುತ್ತಿರುವ ತಮ್ಮನನ್ನು ಅವರು ನೋಡಿ ದರು. ತಮ್ಮನು ಬಂದವನೇ:—"ಅಣ್ಣಾಂದಿರೇ, ಪೇಚಾಟವೇಕೆ?

ಬಹು ಯೋಚನೆಯಲ್ಲಿರುವಂತೆ ಕಾಣುವದಲ್ಲ! ಕಾರಣವೇನೆ''ಂದು ಕೇಳಲಾರಂಭಿಸಿದನು. ಸರಳನಾದ ಆ ಬ್ರಾಹ್ಮಣನು:—ಅಪ್ಪಾ, ಹೀಗಾಯಿತೆಂದು ಹಿಂದಿನ ಸಂಗತಿಯನ್ನು ತಿಳಿಸಲು, ಗೋಪಿಂದನು ಏನೂ ಅರಿಯದವನಂತೆಯೂ, ತಾನು ಬಹು ಯೋಚನೆ ಮಾಡುವಂತೆಯೂ ನಟಿಸಿ ಆ ಮಗುವನ್ನು ಕರೆದು:—ಮಗೂ ನಿನ್ನ ಗೆಜ್ಜೆ ಯಾರು ತೆಗೆದಿಟ್ಟಿರುವರು? ಎಂಬದಾಗಿ ಸಂಜ್ಞೈಸಿ ಕೇಳಲಾರಂಭಿಸಿದನು. ಚೆನ್ನಾಗಿ ಮಾತು ಬರದ್ದರಿಂದ ಮಗುವು 'ಪ್ಪ, ಪ್ಪ' ಎನ್ನಲಾರಂಭಿಸಿತು. ಆಗ್ಗೆ ಮಗು ಹೇಳಿದ ಮಾತಿನ ಅರ್ಥವು ಯಾರಿಗೂ ತಿಳಿಯಲೇ ಇಲ್ಲ.

ಹೀಗೆಯೇ ಕೆಲವು ದಿವಸಗಳು ಕಳೆಯಲು, ಪೇಟೆಯಲ್ಲಿ ಒಬ್ಬ ಅಕ್ಕಸಾಲಿಗನ ಮನೆಯಲ್ಲಿ ತಮ್ಮ ಬಂಗಾರದ ಗೆಜ್ಜೆಗಳನ್ನು ಕಂಡು, ವಿಷ್ಣುಗುಪ್ತರು:—ಇವು ನಮ್ಮವು; ಇಲ್ಲಿಗೆ ಬರಲು ಕಾರಣವೇನೆಂದು ಕೇಳಿದರು. ಅದಕ್ಕೆ ಅಕ್ಕಸಾಲಿಯು:—ಸ್ವಾಮಿ, ಈ ಮಾಲನ್ನು ತಮ್ಮ ತಮ್ಮಂದಿರು ನನಗೆ ಮಾರಿರುವರೆಂದು ಸ್ಪಷ್ಟವಾಗಿ ಹೇಳಿದನು. ಆಗ ಬ್ರಾಹ್ಮಣನು ತನ್ನ ದುರದೃಷ್ಟವನ್ನೇ ನಿಂದಿಸಿಕೊಂಡು, ಮನೆಗೆ ಬಂದು, ತನ್ನ ಹೆಂಡತಿಗೆ ಈ ಎಲ್ಲ ವಿಷಯಗಳನ್ನು ತಿಳಿಸಿ, ಯಾರಿಗಲ್ಲೂ ಹೇಳದೇ ವಂಚಿಸಲೂ, ಮುಂದೆ ಬಲು ಜೋಪಾನದಿಂದಿರಬೇಕೆಂದೂ [illegible] ನೋಡಿದಿರಾ, ಆ ಬ್ರಾಹ್ಮಣನ ಒಳ್ಳೇತನವನ್ನು! ತಮ್ಮನಿಗೆ ಕೇಡಾದರೆ ತನಗೆ ಕೇಡೆಂದು ತಿಳಿದನಲ್ಲ! ಆತನೇ ಧನ್ಯನು! ಹೀಗೆಯೇ ದಿವಸಗಳು ಹೆಚ್ಚಾಗುತ್ತಲಿದ್ದ ತಮ್ಮನ ದುರಾಚಾರಗಳನ್ನು ಸಹಿಸಿ ಸಹಿಸಿ, ಆ ಸಾತ್ವಿಕ ಬ್ರಾಹ್ಮಣನಿಗೆ ಮುಪ್ಪು ಬಂದುಬಿಟ್ಟಿತು. ಇಷ್ಟರಲ್ಲಿಯೇ ಮಗಳೂ ವಿವಾಹಕ್ಕೆ ತಕ್ಕ ವಯಸ್ಸಿನವಳಾದಳು. ಸೀತೆಯು ಬಹು ರೂಪವತಿ; ಆಕೆಯ ಚಟುವಟಿಕೆಯಂತೂ ಹೇಳಲೇ ತೀರದು. ಆಕೆಯು ಸಂಗೀತದಲ್ಲಿ ನಿಪುಣೆಯಾಗುತ್ತ ಬಂದಳು. ಅನೇಕರು ಹುಡುಗಿಯ ಗುಣಗಳನ್ನು ನೋಡಿ ಕನ್ಯಾರ್ಥಿಗಳಾಗಿ ಮನೆಗೆ ಬರಲಾರಂಭಿಸಿದರು. ಹೀಗಿರಲು,

ವಿಷ್ಣುಗುಪ್ತನು ತನ್ನ ಸತಿಯ ದೌರ್ಭಾಗ್ಯದಿಂದಲೋ, ಮಗಳ ದುರದೃಷ್ಟದಿಂದಲೋ ನಿಸ್ಸಾರವಾದ ಸಂಸಾರವನ್ನು ತೊರೆದು, ನಿತ್ಯವಾದ ಭಗವಂತನ ಪದವನ್ನೈದಿದನು!

ಅಣ್ಣನ ಮರಣದನಂತರ ಆ ಚಪಲನಾದ ಗೋವಿಂದನು, ತನ್ನ ಅಣ್ಣನ ದಾಕ್ಷಿಣ್ಯಶ್ರಾದ್ಧವನ್ನು ಜನರ ಕಾಟಕ್ಕಾಗಿ ನೆರವೇರಿಸಿ, ಗಿಡಗಳಿಲ್ಲದ ಊರಲ್ಲಿ ಔಡಲದ ಗಿಡವೇ ಕಲ್ಪವೃಕ್ಷವೆಂಬಂತೆ, ತಾನು ಗೋವಿಂದಾಚಾರಿಯಾದನು. ಆ ಆಚಾರ್ಯರನ್ನೆಷ್ಟು ವರ್ಣಿಸಿದರೂ ತೀರದು! ಮಡಿಯೆಂದರೆ ಅಗಸರು ತಂದದ್ದನ್ನಲ್ಲದೆ ಇನ್ನಾವದನ್ನೂ ಅವರು ಮುಟ್ಟುತ್ತಿರಲಿಲ್ಲ. ಎಂಜಲೆಂದರೆ, ತಾವು ತಿಂದು ಮಿಕ್ಕದ್ದೆ ಎಂಜಲು. ಈ ರೀತಿಯಾಗಿ ದಿನದಿನಕ್ಕೆ ಅಭಿವೃದ್ಧಿಹೊಂದುವ ಇವನ ಅನಾಚಾರವನ್ನು ಸಹಿಸಲಾರದೆ, ಆ ಅನಾಥರಾದ ತಾಯಿ-ಮಕ್ಕಳು ವ್ಯಸನಪಡಲಾರಂಭಿಸಿದರು. ಗೋವಿಂದಾಚಾರಿಯು, ಎಲ್ಲ ಯಜಮಾನಿಕೆಯೂ ತನಗೇ ಬಂತೆಂದು ಬಲು ಹಿಗ್ಗುತ್ತಲಿದ್ದನು. ಒಂದೆರಡು ವರ್ಷಗಳೊಳಗಾಗಿ ಹೊಲಗಳನ್ನೆಲ್ಲ ಮಾರಿ ಬಂದ ಹಣವನ್ನು ಇಸ್ಪೇಟು, ಗಂಜೀಫು ಮೊದಲಾದ ಸತ್ಕಾರ್ಯಗಳಲ್ಲಿ ವೆಚ್ಚಮಾಡಿ, ಮಂಗನಾದನು.

ಇವನ್ನಾದರೂ 'ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ' ಎಂಬಂತೆ ಜನರೆಲ್ಲ ಇವನನ್ನು ಧನಿಕನೆಂದು ತಿಳಿದಿದ್ದರು. ಒಮ್ಮೆ ಪುಣ್ಯೇಶನಗರದಿಂದ ಒಬ್ಬ ದೊಡ್ಡ ಮನುಷ್ಯನು "ನಿಮ್ಮ ಮಗಳನ್ನು ನಮಗೆ ಕೊಡಬೇಕು; ನಿಮ್ಮ ಇಷ್ಟವಿದ್ದಂತೆ ನಾವು ನಡೆಯುತ್ತೇವೆ. ನಮ್ಮಲ್ಲಿಗೆ ಲಗ್ನಕ್ಕೆ ಬರಬೇಕು" ಎಂದು ಕಾಗದ ಬರೆದು, ವಿಚಾರಿಸಿಕೊಂಡು ಬರಲಿಕ್ಕೆ ತನ್ನೊಬ್ಬ ಮಿತ್ರನನ್ನು ಗೋವಿಂದಾಚಾರಿಯ ಬಳಿಗೆ ಕಳುಹಿದ್ದನು.

ಈ ಗೋವಿಂದಾಚಾರಿಯು ಹೆಣ್ಣು ಮಾರಿಕೊಳ್ಳಲು ಹವಣಿಸುತ್ತಿದ್ದನು. ಯಾರಾದರೂ ಶೋಭವತಿಯಾದ ಹೆಣ್ಣೊಂದು ಕೇಳಲಿಕ್ಕೆ ಬರಲು, ಹೆಣ್ಣಿನ ಬೆಲೆ ಏನು ಕೊಡುವಿರೆಂದು ಇತನು ಸ್ಪಷ್ಟವಾಗಿ ಕೇಳು

ತ್ತಿದ್ದನು. ಹೀಗೆ ೫೦೦ ರೂಪಾಯಿಯ ವರೆಗೂ ವ್ಯಾಪಾರ ನಡೆದಿತ್ತು. ಇದು ಸೀತೆಯ ತಾಯಿಗೆ ಸೇರುತ್ತಿದ್ದಿಲ್ಲ; ಆದರೆ ಹೆಂಗಸು; ಮಾಡುವ ಳೇನು? ಸುಮ್ಮನೆ ಮನಸ್ಸಿನಲ್ಲಿ ದುಃಖಪಡುತ್ತಿದ್ದಳು. ಒಂದೊಂದು ವೇಳೆ ಮಗಳನ್ನು ನೋಡಿ ಅಳುವಳು; ಗಂಡನನ್ನು ನೆನಸಿ ಹಂಬಲಿಸು ವಳು; ಈ ಮಹಾರಾಯನಾದ ಆಚಾರಿಯು ಮನೆಗೆ ಬಂದರೆ ಸುಮ್ಮ ನಾಗುವಳು. ಹೀಗಿರಲು, "ದೊಡ್ಡ ಮನುಷ್ಯನ ಪುತ್ರನು ಗೋ- ವಿಂದಾಚಾರಿಯ ಮನೆಯನ್ನು ವಿಚಾರಿಸಿಕೊಂಡು ಮನೆಗೆ ಬಂದನು. ಮನೆಗೆ ಬಂದವರನ್ನು ನೋಡಿ ಆಚಾರಿಯು:—"ಸ್ವಾಮಿ, ಯಾಕೆ ಬಂದಿರಿ? ಯಾವ ಗ್ರಾಮ ತಮ್ಮದು? ಕೂಡ್ರಬೇಕು" ಎಂದು ಒಂದು ಹರಕಚಾಪೆಯನ್ನು ನೆಲದ ಮೇಲೆ ಎಳೆದನು. ಅಥಿತಿಯು ಅದರ ಮೇಲೆ ಕುಳಿತು:—"ಮಹಾಸ್ವಾಮಿ, ನಾನು ಪುಣ್ಯೆಶನಗರದ ಜಮಾದಾರರ ಕಡೆ ಯವನು. ತಮ್ಮಲ್ಲಿಗೆ ಕನ್ಯಾರ್ಥಿಯಾಗಿ ಬಂದಿರುವೆನು" ಎಂದು ತಿಳುಹಿ ದನು. ಅದಕ್ಕೆ ಗೋವಿಂದಾಚಾರಿಯು:—ಆಗಲಿ, ಆಗಲಿ! ಮಧ್ಯಾಹ್ನದ ಮೇಲೆ ಮಾತಾಡೋಣ. ಊಟಕ್ಕೇಳಿರಿ, ಎಂದು ಹೇಳಿ, ಕಾಲು ತೊಳೆ ಯಲು ನೀರು ತಂದಿಡೆಂದು ಮಗಳಿಗೆ ಹೇಳಿದನು. ಆ ಹುಡುಗೆಯು ನಾಚಿಕೆಯಿಂದ ತಂಬಿಗೆಯಲ್ಲಿ ನೀರು ತಂದು ಬಾಗಿಲಲ್ಲಿಟ್ಟಿತು. ಆ ಗೃಹ ಸ್ಥನು ಹುಡುಗೆಯನ್ನು ನೋಡಿ:—"ಅಹಹ! ಹುಡುಗಿ ಎಷ್ಟು ಚಲುವೆ? ನೋಟವೆಷ್ಟು ನಗಸು? ಮುಖವೆಷ್ಟು ಸುಂದರವಾಗಿದೆ? ಹ್ಯಾಗಾದರೂ ಇಂಥ ಕನ್ಯಾರತ್ನವು ನಮ್ಮ ಸ್ನೇಹಿತನಿಗೆ ದೊರೆಕರೆ, ಅವನ ಅದೃಷ್ಟವೇ ಸರಿ"! ಎಂದು ಮನಸ್ಸಿನಲ್ಲಿ ಬಹುವಿಧವಾಗಿ ಚಿಂತಿಸಿದನು. ಅನಂತರ ಕಾಲುಗಳನ್ನು ತೊಳೆದುಕೊಂಡು ಅಷ್ಟರಲ್ಲಿಯೇ ಉನಾಯಿಸಿ ಇಟ್ಟಿದ್ದ ಮಡಿಯನ್ನು ಉಟ್ಟು, ವಿನೋದವಾಗಿ ಮಾತುಗಳನ್ನಾಡುತ್ತ ಭೋಜನ ಮಾಡಿದನು.

ಭೋಜನಾನಂತರ ಗೋವಿಂದಾಚಾರಿಯು ಆ ಕನ್ಯಾರ್ಥಿಯನ್ನು

ಕೈಹಿಡಿದು ಕರಕೊಂಡು ಏಕಾಂತಾಗಾರಕ್ಕೆ ತೆರಳಿದನು ಅಲ್ಲಿ ತಾಂಬೂಲಾದಿಗಳನ್ನು ಸವಿದು ವಿನೋದವಾಗಿ ಕುಳಿತಿರುವಾಗ ಆಚಾರಿಯು:—"ಏನು ಸ್ವಾಮಿ, ನೀವು ಹೆಣ್ಣು ಕೇಳುವದಕ್ಕೆ ಬಂದೇನೆಂದಿರಷ್ಟೇ? ವರನು ನಿಮಗೇನಾಗಬೇಕು? ಬಹಳ ಧನವುಳ್ಳವನೇ ಹ್ಯಾಗೆ?" ಎಂತ ವಿಚಾರಿಸಿದನು. ಅದಕ್ಕೆ ಆ ಕನ್ಯಾರ್ಥಿಯು:—"ಸ್ವಾಮಿ, ಆತನು ನನ್ನ ಸ್ನೇಹಿತನು. ಈಗ ಆತನಿಗೆ ನಮ್ಮೂರಲ್ಲಿ ಜವಾದಾರ ಕೆಲಸವಿದೆ ಅವನ ಪೂರ್ವಿಕರು ತುಂಬಾ ಪುಷ್ಟರು. ಒಂದು 'ಲ'ಕಾರಕ್ಕೇನೂ ಕಡಿಮೆಯಿಲ್ಲ" ಎಂದನು. ಆಗ ಗೋವಿಂದಾಚಾರಿಗೆ ಆಶೆ ಹುಟ್ಟಿತು. ಆತನು ತನ್ನ ಮನಸ್ಸಿನಲ್ಲಿ—ಒಹೋ! ಇದು ಒಳ್ಳೆಯ ಸಮಯ. ಅವನೇ ನನಗಳಿಯನಾದರೆ ಬೇಕಾದಷ್ಟು ಧನದೊರೆಯುವದು. ನಮ್ಮಣ್ಣನ ಮಗಳನ್ನು ಬಹಳ ಹಣಕ್ಕೆ ಮಾರಬಹುದು. ಇರಲಿ. ಮುಳ್ಳೂ ವಿಚಾರಿಸೋಣ. ಎಂದು ಯೋಚಿಸಿ:—ಸ್ವಾಮಿ, ಅವನಿಗೆ ವಯಸ್ಸೆಷ್ಟು? ಎಷ್ಟನೇ ವಿವಾಹವು? ಎಂದು ಕೇಳಿದನು. ಅದಕ್ಕೆ ಆ ಕನ್ಯಾರ್ಥಿಯು:—ಆಚಾರ್ಯರೇ, ವಯಸ್ಸೇನು, ಮೂವತ್ತಿರಬಹುದು. ಎರಡನೆಯ ಸಂಬಂಧ, ಎಂದನು. ಆಚಾರಿಯು:—ಒಹೋ! ಹಾಗಾದರೆ ಯೋಚನೆಯಿದೆ. ಮೂವತ್ತು ವರ್ಷವೆನ್ನುವಿರಲ್ಲ! ಹೇಗಾದರೂ ಸರಿ. ಹೆಣ್ಣಿನ ತೆರ ನಮಗೇನು ಕೊಡುವರು? ಎಂಬುವಷ್ಟರಲ್ಲಿ ಕನ್ಯಾರ್ಥಿಯು:—ಅಹಹ! ಮರೆತಿದ್ದೆ, ಒಂದು ಕಾಗದ ಬೇರೆ ಕೊಟ್ಟಿರುವರು. ಪರಾಂಬರಿಸಬೇಕೆಂದು ಕಿಸೆಯಿಂದ ಕಾಗದವನ್ನು ತೆಗೆದು ಆಚಾರಿಯ ಕೈಗಿತ್ತನು.

ಆಚಾರಿಯು ಕಾಗದವನ್ನು ಓದಿ ನೋಡಿ, ಮನಸ್ಸಿನಲ್ಲಿ "ಭಲ, ಭಲ! ಒಳ್ಳೇ ಅಳಿಯ ಸಿಕ್ಕಿದನು. ಮೊದಲನೇದು ಲಗ್ನದ ಖರ್ಚು ನಮಗಿಲ್ಲ. ಮೇಲೆ ನಾನು ಒಂದು ಸಾವಿರ ರೂಪಾಯಿಗಳನ್ನು ಕೇಳಿದರೂ ಕೊಡುವಂತೆ ತೋರುತ್ತಾನೆ; ಮತ್ತು ಒಂದು ಸೇರು ಬಂಗಾರ ಮಗಳಿಗೆ ಹಾಕಬೇಕಂತ ಹೇಳೋಣ, ಆ ಮೇಲೆ ಅದೂ 'ಗೋವಿಂದಾರ್ಪಣವೇ.'

ಎಂದು ಯೋಚಿಸಿದನು ಯೋಚಿಸಿದಂತೆಯೇ ಕಾಗದ ಬರೆದು ಚನ್ನಾಗಿ ಮೊಹರು ಮಾಡಿ ಕನ್ಯಾರ್ಥಿಯ ಕೈಯಲ್ಲಿ ಕೊಡಬೇಕೆಂದು ನಿಶ್ಚಯಿಸಿದನು. ಎರಡು ನಿಮಿಷಗಳ ಮೇಲೆ ಗೋವಿಂದಾಚಾರ್ಯರು ಕನ್ಯಾರ್ಥಿಗೆ:—ಮಹಾಸ್ವಾಮಿ, ದೈವಾನುಕೂಲವಿದ್ದರೆ ನಡೆಯಬಹುದು. ಕಾಗದವೇನೋ ಸಮರ್ಪಕವಾಗಿದೆ. ನಾವೂ ಒಂದು ಕಾಗದವನ್ನು ಬರೆದು ಕೊಡುವೆವು. ತಮ್ಮ ಸ್ನೇಹಿತನಿಗೆ ಸಲ್ಲಿಸಿರಿ; ಮತ್ತು ಜಾಗ್ರತೆ ಯಿಂದ ಹೋಗಬೇಕೆಂದು ಅವರಿಗೆ ತಿಳಿಸಿ, ಎಂದು ಕಾಗದವನ್ನು ಬರೆದು ಕೊಟ್ಟನು. ಕನ್ಯಾರ್ಥಿಯು ಹೋಗಿ ಬರುವೆನೆಂದು ಹೇಳಿ ತನ್ನ ಸ್ಥಳಕ್ಕೆ ತೆರಳಿದನು.

ತನ್ನ ಪಟ್ಟಣವನ್ನು ತಲ್ಪುವ ಬಳಿಕ ಆ ಗೃಹಸ್ಥನು ಭೋಜನಾದಿಗಳನ್ನು ಮನೆಯಲ್ಲಿ ತೀರಿಸಿಕೊಂಡು, ಸಾಯಂಕಾಲಕ್ಕೆ ತನ್ನ ಸ್ನೇಹಿತನ ಮನೆಗೆ ತೆರಳಿದನು. ಆಗ್ಗೆ ಜಮಾದಾರರಾದ ವರದಾಚಾರ್ಯರು ಮನೆಯ ಹೊರಭಾಗದಲ್ಲಿ ಗಿಡಗಳನ್ನು ನೋಡುತ್ತ ತಿರುಗಾಡುತ್ತಿದ್ದರು. ಅವರು ಬಂದ ಸ್ನೇಹಿತನನ್ನು ನೋಡಿ, ಅವನ ಕೈ ಹಿಡಿದು ಒಳಹೊಕ್ಕರು. ಕುಶಲ ಪ್ರಶ್ನೆಗಳಾದ ಮೇಲೆ, ಕೆಲಸವೇನಾಯಿತೆಂದು ಕೇಳಿದರು. ಅದಕ್ಕಾ ಮಿತ್ರನು:— ಕೆಲಸವು ಅನುಕೂಲವಾದಂತೆ ತೋರುವದು. ಇಗೋ, ನಿಮ್ಮ ಮಾವಂದಿರು ಈ ಕಾಗದ ಕೊಟ್ಟಿರುವರೆಂದು ಕಾಗದವನ್ನು ಆತನ ಕೈಯಲ್ಲಿ ಕೊಟ್ಟನು. ಅದನ್ನು ನೋಡಿ ಓದಿಕೊಂಡ ವರದಾಚಾರ್ಯರು:— ಓಹೋ, ಒಳ್ಳೇದಾಯಿತು ಹೆಣ್ಣಿಗೋಸ್ಕರ ಸಾವಿರ ರೂಪಾಯಿ ಕೊಡಬೇಕೇ? ಬಂಗಾರ ಜೇರೆ. ಇರಲಿ, ನೋಡೋಣ, ಎಂದುಕೊಂಡು:—ಅಯ್ಯಾ, ಕನ್ಯೆಯು ಹೇಗಿರುವಳೆಂದನು. ಅದಕ್ಕೆ ಸ್ನೇಹಿತನು.—ಮಿತ್ರನೆ, ಹೇಳಲೇನು? ಬಹು ರೂಪವತಿ, ಸುವರ್ಣದ ವರ್ಣ, ಮುಖ ಬಹು ದುಂಡು, ನೋಟ ಬಲು ಚಪಲ, ಹೆಚ್ಚಿಗೆ ಹೇಳಲೇನು? ಹ್ಯಾಗಿದ್ದರೂ ನಿನ್ನ ಮಾವಂದಿರು ನಿನ್ನನ್ನು ಕೂಡಲೆ ಬಂದು ಹೋಗ

ಬೇಕೆಂತ ಹೇಳಿದ್ದಾರೆ. ನೀನೇ ಹೋಗಿ ನೋಡಿ ಬಂದರೆ, ಎಲ್ಲವೂ ನಿನಗೇ ಅನುಭವವಾಗುತ್ತದೆ, ಎಂದು ಹೇಳಿದನು.

ಮಿತ್ರನ ಮಾತುಗಳನ್ನು ಕೇಳಿ, ಜಮಾದಾರನು ಮನಸ್ಸಿನಲ್ಲಿ:— ಎಷ್ಟು ದ್ರವ್ಯ ವೆಚ್ಚವಾದರೇನು, ಇಂಥ ಹೆಣ್ಣನ್ನು ವಿವಾಹವಾಗಲೇಬೇಕೆಂದು ನಿಶ್ಚಯಿಸಿ, ಸ್ನೇಹಿತನ ಸಂಗಡ ಸ್ವಲ್ಪ ಮಾತಾಡುತ್ತ ಕುಳಿತಿದ್ದನು. ಅಷ್ಟರಲ್ಲಿ ಹೊರಗೆ ಬಂದ ಜವಾನನನ್ನು ನೋಡಿ, ವರದಾಚಾರ್ಯರು:- ಅಯ್ಯಾ, ಪುತ್ರನೆ, ಯಾರೋ ಬಂದಿರುವರು; ವಿಚಾರಿಸೋಣವೆಂದು ಪುತ್ರನನ್ನೂ ಹೊರಗೆ ಕರೆದುಕೊಂಡು ತೆರಳಿದನು. ಜವಾನನು:— ಸಲಾಂ ಮಹಾರಾಜ್, ಯಲಹಂಕದ ಬೀದಿಯಲ್ಲಿ ಕಳವಾಗಿತ್ತಷ್ಟೇ; ಅದರಲ್ಲಿ ಇಬ್ಬರು ಕಳ್ಳರು ಸಿಕ್ಕಿರುವರು. ಪರಾಂಬರಿಸಬೇಕೆಂದನು. ಅಷ್ಟರಲ್ಲಿಯೇ ಮಿತ್ರನು:—ಹೊತ್ತಾಯಿತು, ಮನೆಗೆ ಹೊರಡುವೆನೆಂದು ನಮಸ್ಕಾರ ಮಾಡಿ ತೆರಳಿದನು. ಆದಕ್ಕೆ ಜವಾದಾರನು:—ಒಳ್ಳೇದು, ವಿಶ್ವಾಸವಿರಲಿ; ನಾನೂ ಈ ರಾತ್ರಿ ರೈಲಿನಲ್ಲಿ ಹೊರಟು, ಮಾಹಿಷ್ಮತೀ ಪಟ್ಟಣಕ್ಕೆ ಹೋಗಿ ಕನ್ಯೆ ನೋಡಿಕೊಂಡು ಬರುವೆನು, ಎಂದು ನಮಸ್ಕರಿಸಿ, ಒಳಕ್ಕೆ ತೆರಳಿದನು. ಒಳಗೆ ಹೋಗಿ ಎರಡು ದಿವಸದ ಪೂರ್ತೀ ಒಂದು ರಜಾರಿಪೋರ್ಟ ಬರೆದು, ಜವಾನನ ಕೈಯಲ್ಲಿತ್ತು, ಅದನ್ನು ಇನಸ್ಪೆಕ್ಟರರಿಗೆ ಕೊಡೆಂತ ತಿಳಿಸಿದನು. ಜವಾನನು ಸಲಾಂ ಸಲಾಂ ಎನ್ನುತ್ತ ಪ್ರಯಾಣ ಮಾಡಿದನು.

ವರದಾಚಾರಿಯು ಯೋಚಿಸಿದಂತೆ ಆ ರಾತ್ರಿ ಹೊರಟು, ಮರು ದಿವಸ ಮಧ್ಯಾಹ್ನದ ೧೨ ಘಂಟೆಗೆ ಮಾಹಿಷ್ಮತೀ ನಗರಕ್ಕೆ ಹೋದನು. ರೈಲಿಗಿಳಿದು ಕಾಗದದಲ್ಲಿ ಬರೆದ ಪತ್ರೆಯಂತೆ ಗೋವಿಂದಾಚಾರಿಯ ಮನೆಗೆ ಬಂದು ಸೇರಿದನು. ಆಗ್ಗೆ ಆಚಾರಿಯು ಮನೆಯಲ್ಲಿ ಇದ್ದಿಲ್ಲ. ಆ ಹುಡಿಗಿಯ ತಾಯಿಯು ನೀರಿಗೆ ಹೋಗಿದ್ದಳು. ಹೊತ್ತಿಗೆ ಸರಿಯಾಗಿ ಹುಡುಗಿಯು ವೀಣೆಯ ಅಭ್ಯಾಸ ಮಾಡುತ್ತ ಒಳಗೆ ಕುಳಿತಿದ್ದಳು.

ವರದಾಚಾರಿಯು ಬಾಗಿಲಲ್ಲಿ ನಿಂತು:—ಗೋವಿಂದಾಚಾರ್ಯರು ಇದ್ದಾರೆಯೋ? ಎಂದು ಕೇಳಿದನು. ಅದಕ್ಕೆ ಬಾಲೆಯು:—'ಈಗ ತಾನೆ ಪೇಟೆಗೆ ಹೋದರು. ಇನ್ನು ಕಾಲುಗಂಟೆಯೊಳಗೆ ಬಂದಾರು' ಎಂದಳು. ಆ ಬಾಲೆಯ ಗಾನವನ್ನೂ, ಸ್ನೇಹಿತನು ಹೇಳಿದಂತೆ ಇರುವ ಅವಳ ರೂಪವನ್ನೂ, ಮಾತಿನ ಚಟುವಟಿಕೆಯನ್ನೂ ನೋಡಿ, ವರದಾಚಾರ್ಯನು ಬಹು ಸಂತೋಷಪಟ್ಟನು. ಸ್ನೇಹಿತನು ಹೇಳಿದ ಹುಡುಗಿಯು ಇವಳೇ ಇರಬಹುದೆ? ಇಂಥಾ ಕನ್ಯಾರತ್ನವು ನನಗೆಲ್ಲಿ ಸಿಕ್ಕೀತು! ಎಂಬ ವಿಚಾರಗಳು ಅವನ ಮನಸ್ಸಿನಲ್ಲಿ ಬರುವಷ್ಟರೊಳಗೆ ಗೋವಿಂದಾಚಾರಿಯೂ ಪೇಟೆಯಿಂದ ಮನೆಗೆ ಬಂದನು ಬಾಗಿಲಲ್ಲಿ ನಿಂತಿರುವ ಈತನನ್ನು ನೋಡಿ, ನೀವು ಯಾರೆಂದು ವಿಚಾರಿಸಿದನು. ಅದಕ್ಕೆ ವರದಾಚಾರಿಯು:—ನಾನು ಪುಣ್ಯೇಶನಗರದ ವರದಾಚಾರ್ಯನೆಂಬವನು, ಎನ್ನಲು, ಗೋವಿಂದಾಚಾರಿಯು:—ಜವಾದಾರರೇ, ಒಳಗೆ ದಯಮಾಡಿಸಬೇಕೆಂದನು. ಈ ಮಾತುಗಳನ್ನೆಲ್ಲ ಕೇಳಿ, ವರದಾಚಾರ್ಯನ ಸುಂದರವಾದ ರೂಪವನ್ನು ನೋಡಿ, 'ನಮ್ಮ ಚಿಕ್ಕಪ್ಪ ಹೇಳಿದ ಪುರುಷನೀತನೇ ಇರಬಹುದೇ?' ಎಂದು ಯೋಚಿಸುತ್ತ ಹುಡುಗಿಯು ಒಳಗೆ ನಡೆದಳು.

ಗೋವಿಂದಾಚಾರಿಯು ಬಹುಮಾನದಿಂದ ವರದಾಚಾರ್ಯನನ್ನು ಒಳಗೆ ಕರೆದುಕೊಂಡು ನಡೆದನು ಕುಶಲ ಪ್ರಶ್ನೆಗಳೆಲ್ಲ ನಡೆದ ಮೇಲೆ ವಿವಾಹದ ವಿಷಯವಾಗಿ ವಿಚಾರವಾಯಿತು ಗೋವಿಂದಾಚಾರಿಯು "ಮಗಳಿಗೆ ಹನ್ನೆರಡು ವರ್ಷಗಳು ತುಂಬಿದವು. ಇದೇ ಮಾಘದಲ್ಲಿ ಲಗ್ನ ಮಾಡಬೇಕೆ"ಂದನು. ವರದಾಚಾರಿಯು ಹಾಗೇ ಆಗಲೆಂದು ಒಡಂಬಟ್ಟನು. "ಹೇಗಾದರೂ ಆಗಲಿ, ಅಳಿಯನು ಜವಾದಾರನೆಂದೆನ್ನುತ್ತಾರೆ. ಅನ್ನ ವಸ್ತ್ರಕ್ಕೇನೂ ಕೊರತೆಯಿಲ್ಲ. ಈ ಶನಿಯ ರಗಳೆ ಸ್ವಲ್ಪ ತಪ್ಪಿದಂತೆ ಆಗುತ್ತದೆ" ಎಂದು ಯೋಚಿಸಿ, ವಧುವಿನ ತಾಯಿಯೂ ಮೈದುನನ ವಿಚಾರಕ್ಕೆ ಒಡಂಬಟ್ಟಳು. ಅನಂತರ ಸ್ನಾನ ಪಾನಾದಿಗಳೂ, ಪಕ್ವಾನ್ನ

೨ನೆಯ ಪ್ರಕರಣ.

-[೧]-

## ರಾಹುದರ್ಶನ!

ವರದಾಚಾರ್ಯನು ತನಗೆ ಸುಗುಣೆಯಾದ ಸತಿಯು ದೊರೆತಳೆಂದು ಬಹು ಸಂತೋಷಪಡುತ್ತಿದ್ದನು. ಹೀಗಿರುವಷ್ಟರಲ್ಲಿ ಆ ಸುಮಂಗಲೆಯ ಪಾಣಿಗ್ರಹಣದಿಂದಲೋ, ಏನೋ ಎಂಬಂತೆ ಆ ವರದಾಚಾರಿಗೆ "ಇನ್ ಸ್ಪೆಕ್ಟರ ಕೆಲಸಕ್ಕೆ ನಿಮ್ಮನ್ನು ವರ್ಗ ಮಾಡಿದೆ" ಎಂದು ಸರಕಾರದ ಅಪ್ಪಣೆಯು ಬಂತು. ಅಭಿವೃದ್ಧಿಯ ಕಾಲವೆಂದರೆ ಹೀಗೆಯೇ ಅಲ್ಲವೇ? ವರದಾಚಾರಿಗೆ ಬಹು ಸಂತೋಷ!! ಹೇಳಲೇನು? ಕ್ರಮದಿಂದ ಈ ವರ್ತಮಾನವನ್ನು ಆತನು ಮಾವನಿಗೆ ತಿಳಿಸಿದನು. ಅದನ್ನು ಕೇಳಿ ಸೀತೆಯೂ ಹಿಗ್ಗಿದಳು.

ಮುಂದೆ ಕೆಲವು ದಿವಸಗಳಲ್ಲಿ ಹುಡುಗಿಯು ಪ್ರೌಢಳಾದಳು. ಗೋವಿಂದಾಚಾರಿಯು ಸಮಯೋಚಿತ ಕೃತ್ಯಗಳನ್ನು ನೆರವೇರಿಸಿ, ಮಗಳನ್ನು ಅಳಿಯನೊಡನೆ ಕಳುಹಿಸಿದನು. ವರದಾಚಾರಿಯು ಹೆಂಡತಿಯೊಡನೆ ಬಂಧುಜನರಿಗೆಲ್ಲ ನಮಸ್ಕರಿಸಿ, ತನ್ನ ವಾಸಸ್ಥಾನಕ್ಕೆ ತೆರಳಿದನು. ವನಲಕ್ಷ್ಮಿಯೊಡನೆ ಕೂಡಿದ ವಸಂತನಂತೆ ಪ್ರಿಯಳೊಡಗೂಡಿದ ಆ ಪ್ರಾಯಸ್ಥನು, ಬಹು ಆನಂದದಿಂದ ಸಂಸಾರಸುಖವನ್ನು ಅನುಭವಿಸತೊಡಗಿದನು. ಬೇಕಾದಷ್ಟು ಐಶ್ವರ್ಯವು, ಮೇಲೆ ಕೈಯಲ್ಲಿ ಅಧಿಕಾರ; ಕೇಳುವದೇನು! ಅಷ್ಟರಲ್ಲಿ ಆ ಯುವತಿಯೂ, ದೈವಯೋಗದಿಂದ ಗರ್ಭಿಣಿಯಾದಳು. ಅದರಿಂದ ಕಬ್ಬಿನ ಮೇಲೆ ಜೇನು ಇಟ್ಟಂತಾಯಿತು! ಗೋವಿಂದಾಚಾರಿಯು ಈ ವರ್ತಮಾನವನ್ನು ಕೇಳಿ, ಮನೆಯಲ್ಲಿ ಅತ್ತಿಗೆಯ ಕಾಟವನ್ನು ತಡೆಯಲಾರದೆ, ಪುಣ್ಯನಗರಿಯಲ್ಲಿದ್ದ ಮಗಳನ್ನು ತಮ್ಮ ಮನೆಗೆ ಕರೆತರಬೇಕಾಯಿತು. ಉತ್ಸವಿಲ್ಲ! ಲೋಕದಂತೆ ನಡೆ

ಯಬೇಕು! 'ಅಕ್ಕಿಯ ಮೇಲೆ ಆಶೆ, ನೆಂಟರ ಮೇಲೆ ಪ್ರೀತಿ' ಎಂಬಂತೆ ಗೋವಿಂದಾಚಾರಿಯು ಮನದಲ್ಲಿ ಪೇಚಾಡಿ ಪೇಚಾಡಿ, ಬಹು ಕಷ್ಟಪಟ್ಟು ಮಗಳನ್ನು ಕರೆಯುವದಕ್ಕೆ ಹೊರಟನು.

ಅತ್ತಲಾ ಸೀತಾಬಾಯಿಯು ನನ್ನ ತಾಯಿಯ ಮನೆಯವರು ನನ್ನ ಯೋಗಕ್ಷೇಮವನ್ನಾದರೂ ವಿಚಾರಿಸಲಿಲ್ಲವಲ್ಲ? ಎಂದು ಬಹು ವಿಧವಾಗಿ ಹಲುಬುತ್ತಿದ್ದಳು. ಅಷ್ಟರಲ್ಲಿ ಚಿಕ್ಕಪ್ಪನು ಮನೆಗೆ ಬಂದು ಸೇರಿದನು. ಆತನನ್ನು ನೋಡಿ ಸೀತಾಬಾಯಿಗೆ ಬಹು ಸಂತೋಷ; ಬಹು ಹಿಗ್ಗು; ಹೆಣ್ಣುಮಕ್ಕಳ ತಂದೆ-ತಾಯಿಗಳಿಗೆ ಈ ವಿಷಯವ ಹೆಚ್ಚು ಹೇಳಲೇನು! ಬಂದೊಡನೆ ಸೀತಮ್ಮನು ತಂದೆಗೆ ನಮಸ್ಕರಿಸಿದಳು. ಯೋಗಕ್ಷೇಮವಾದ ಮೇಲೆ ತನ್ನ ತಾಯಿಯ ಆರೋಗ್ಯವನ್ನು ವಿಚಾರಿಸಿದಳು. ವರದಾಚಾರಿಯಾದರೂ ಬಹು ದಿವಸಕ್ಕೆ ಬಂದ ಮಾವನನ್ನು ನೋಡಿ, ಬಹುಮಾನಿಸಿದನು. ಸ್ವಲ್ಪ ಹೊತ್ತು ಮಾತನಾಡುತ್ತಲಿದ್ದು ನಂತರ ಸ್ನಾನ-ಪಾನಾದಿಗಳನ್ನು ನೆರವೇರಿಸಿದರು. ಊಟವಾದ ಮೇಲೆ "ಮಗಳನ್ನು ಕರೆದುಕೊಂಡು ಹೋಗಬೇಕೆ"ಂದು ಗೋವಿಂದಾಚಾರಿಯು ತನ್ನ ಅಳಿಯನಿಗೆ ತಿಳಿಸಿದನು. ಆತನೂ ಲೋಕರೂಢಿಯಂತೆ ಯಾಕಾಗಲೊಲ್ಲದೆಂದು ಒಡಂಬಟ್ಟನು. ಆ ದಿವಸವೇ ಸಾಯಂಕಾಲ ಮುಹೂರ್ತವು ಚನ್ನಾಗಿದೆ, ಎಂದು ಅವರು ಹೊರಟರು. ಆ ಯುವತಿಯ ಆಗಿನ ಮನೋಭಾವವನ್ನು ಏನು ಹೇಳೋಣ! ಬಹು ದಿವಸಗಳಿಂದಲೂ ನೋಡದೆ ಇದ್ದ ತಾಯಿಯನ್ನು ನೋಡುವೆನೆಂಬ ಸಂತೋಷ; ತನ್ನ ಪ್ರಿಯನನ್ನು ಬಿಟ್ಟು ತಾನೊಬ್ಬಳೇ ತೆರಳಬೇಕೆಂಬ ದುಃಖ; ಈ ಸಂತೋಷ-ದುಃಖಗಳೆಂಬ ಎರಡೂ ನದಿಗಳಲ್ಲಿಯೂ ಅವಳು ಮುಳುಗಿದಳು. ಹೀಗೆ ವಿರುದ್ಧ ಭಾವನೆಗಳ ಆಘಾತದಿಂದ ಗಾಸಿಯಾದ ಆ ಸತಿಯು ಪತಿಗೆ ನಮಸ್ಕರಿಸಿ, ಅಪ್ಪಣೆ ತೆಗೆದುಕೊಂಡು ಚಿಕ್ಕಪ್ಪನೊಡನೆ ತೆರಳಿದಳು.

ಮರುದಿವಸ ಮಧ್ಯಾಹ್ನಕ್ಕೆ ಗೋವಿಂದಾಚಾರಿಯು ತನ್ನ ವಾಸ

ನಲ್ಲ:—"ಅಳಿಯನೆಂದರೆ, ಈತನಿಗೇ ಅನ್ನಬೇಕು. ನೋಡಿದೆಯಾ ಎಷ್ಟು ದಾಕ್ಷಿಣ್ಯ (ಭಿಡೆ)? ಇನ್ನು ಐದಾರು ತಿಂಗಳು ತನಗೆ ಪರಾವು ವಿಲ್ಲವಂತೆ; ಅದಕ್ಕಾಗಿ, ಹೆಂಡತಿ-ಮಕ್ಕಳು ಅಲ್ಲಿಯೇ ಇರಲಿ. ತಿಂಗಳಿಗೆ ಇಪ್ಪತ್ತು ರೂಪಾಯಿಗಳಂತೆ ಕಳುಹಿಸುತ್ತೇನೆ" ಎಂದು ಪತ್ರ ಬರೆದಿರುವನು. ಭಲೆ! ತುಂಬಾ ಸಂತೋಷವಪ್ಪಾ. ಹೀಗಾದರೆ ನಮ್ಮ ಮಗಳು ನಮ್ಮ ಮನೆಯಲ್ಲಿಯೇ ಇರಲಿ. ಯಾರದೇನು ಹೋಯಿತು? ಮುಖ್ಯವಾಗಿ ನಮ್ಮ ಸಂಸಾರವೂ ನಡೆದಂತಾಯಿತು. "ಊರ ಅಕ್ಕಿ, ಊರ ಬೇಳೆ, ನೀನೂ ಊಟ ಮಾಡಿಕೊಂಡು ಹೋಗ ಮಾರವ್ವ, ಮಿಕ್ಕದ್ದು ಸಕ್ಕದ್ದು ನಾವೂ ಊಟ ಮಾಡುವೆವು" ಎಂಬ ಗ್ರಾಮ್ಯ ಜನರ ಉಕ್ತಿಯನ್ನು ಮನಸ್ಸಿನಲ್ಲಿ ಚಿಂತಿಸುತ್ತ ಆಚಾರಿಯು ಒಳಹೊಕ್ಕನು.

ತಾಯಿಗೂ, ಮಗಳಿಗೂ ಈ ರೂಪಾಯಿಗಳ ಸಮಾಚಾರದ ಹೊರತಾಗಿ ಮಿಕ್ಕ ಸಮಾಚಾರಗಳನ್ನೆಲ್ಲ ಒಂದಕ್ಕೆ ಎರಡರಂತೆ ತಿಳಿಸಿದನು. ಈ ಮಾತನ್ನು ಕೇಳಿ ಸೀತಾಂಬೆಯು:—"ಇನ್ನೂ ಐದು ತಿಂಗಳು ಇಲ್ಲಿಯೇ ಇರಬೇಕೇ!!" ಎಂದು ಯೋಚನೆ ಮಾಡತೊಡಗಿದಳು. ಹೀಗಿರಲು, ಮೂರು ನಾಲ್ಕು ದಿವಸಗಳಲ್ಲಿ ಗಂಡನಿಂದ ಬಂದ ತನ್ನ ಹೆಸರಿನ ಕಾಗದವನ್ನು ನೋಡಿ ಬಹು ಸಂತೋಷದಿಂದ ಓದತೊಡಗಿದಳು. ಅದರಲ್ಲಿ ತಿಂಗಳಿಗೆ ಇಪ್ಪತ್ತು ರೂಪಾಯಿಗಳನ್ನು ಕಳುಹಿಸುವೆನೆಂದು ಬರೆದಿತ್ತು. ಈ ವಿಷಯವನ್ನು ತಾಯಿಯ ಮುಂದೆ ತಿಳುಹಿದಳು. ಅದಕ್ಕೆ ತಾಯಿಯು ಅಮ್ಮಾ:—ನಿಮ್ಮ ಚಿಕ್ಕಪ್ಪನು ಸಾಮಾನ್ಯನೆಂದು ತಿಳಿಯಬೇಡ ಕಳ್ಳರೊಳಗೂ, ಸುಳ್ಳರೊಳಗೂ, ಮೋಸಗಾರರೊಳಗೂ ಮೊದಲನೆಯವನು; ಹುಡುಗಿ, ನಿನಗೇನು ತಿಳಿಯುವದು? ನೋಡಿದೆಯಾ, ರೂಪಾಯಿಗಳನ್ನು ಕಳುಹಿಸುತ್ತಾರೆಂದು ಹೇಳಲೇ ಇಲ್ಲವಲ್ಲ! "ಇಷ್ಟು ಅವಸರವೇಕೆ, ಮಗಳು ಇನ್ನೂ ಐದು ತಿಂಗಳು ನಮ್ಮಲ್ಲೇ ಇರಲಿ.' ಎಂದನಲ್ಲ? ಇದರಲ್ಲೇನೋ ಕೌತುಕವಿದೆ, ಎಂದು ನನಗೆ

ಆ ದಿವಸವೇ ಅನುಮಾನವಾಯಿತು. ಅಮ್ಮಾ, ನಿಮ್ಮ ಚಿಕ್ಕಪ್ಪನ ಮಹಿಮೆಯು ಇಷ್ಟೇ ಅಲ್ಲ; ಈ ದಿವಸ ಹೇಳುವೆನು; ಕೇಳು. ಎಂದು ವಿಸ್ತಾರವಾಗಿ ಹಿಂದಿನ ಚರಿತ್ರೆಯನ್ನೆಲ್ಲ ಹೇಳಿದಳು. ಸೀತಾಂಬೆಗೆ ಇದನ್ನೆಲ್ಲ ಕೇಳಿ, ತಕ್ಕನು ಎಷ್ಟು ಮೋಸಗಾರನೆಂದು ಮನಸ್ಸಿನಲ್ಲಿ ಸ್ವಲ್ಪ ಯೋಚನೆಯೂ, ಸ್ವಲ್ಪ ಅಪನಂಬಿಗೆಯೂ ಹುಟ್ಟಿತು; ಆದರೂ ಬುದ್ಧಿವಂತಳಾದ್ದರಿಂದ ಆಕೆಯು ಇದನ್ನು ಒಬ್ಬರಿಗೂ ತಿಳಿಯಗೊಡಲಿಲ್ಲ.

ಇತ್ತ ವರದಾಚಾರಿಯು ತನ್ನ ಸ್ಥಳಾಂತರದ ಕೆಲಸವನ್ನು ಮುಗಿಸಿಕೊಂಡು ಪುನಃ ಪುಣ್ಯೇಶನಗರದ ಪೂರ್ವದ ಕೆಲಸಕ್ಕೆ ಹಾಜರಾದನು. ಒಡನೆ ಆತನು ತನ್ನ ಮಾವನಿಗೆ:—ನೀವು ನನ್ನ ಹೆಂಡತಿ-ಮಕ್ಕಳನ್ನು ಕರೆದುಕೊಂಡು ಬರಬೇಕು. ನಾನು ಬರಲು ರಜೆಯು ಸಿಕ್ಕುವದಿಲ್ಲ. ದಾರಿಯ ಖರ್ಚಿಗಾಗಿ ಐವತ್ತು ರೂಪಾಯಿಗಳನ್ನು ಕಳುಹಿಸಿರುವೆನು; ಎಂದು ಕಾಗದ ಬರೆದು ಆ ದಿವಸ ಹಣ ಮನಿಯಾರ್ಡರ್ ಮಾಡಿ ಕಳುಹಿಸಿದನು. ಇಲ್ಲಿ ಸೀತಾಂಬೆಯು:—"ನಾಲ್ಕೈದು ತಿಂಗಳಾದವಲ್ಲ!! ಯಾವಾಗ ಊರಿಗೆ ಹೋಗುವದು?" ಎಂದು ಯೋಚಿಸುತ್ತಲೇ ಇದ್ದಳು. ಗೋವಿಂದಾಚಾರಿಗೆ ಮಗಳು ಪತಿಯ ಮನೆಗೆ ಹೋಗುವದೇ ಇಷ್ಟವಿದ್ದಿಲ್ಲ ನೋಡಿದಿರಾ! ದ್ರವ್ಯಪಿಶಾಚಿಯ ಸಾಮರ್ಥ್ಯವನ್ನು? ಅಷ್ಟರಲ್ಲಿ ವರದಾಚಾರಿಯ ಕಾಗದವು ಬಂದು ತಲ್ಪಿತು; ರೂಪಾಯಿಗಳೂ ಬಂದವು. ಆಚಾರಿಯು ಓದಿಕೊಂಡು, "ನಡೆದಷ್ಟು ದಿವಸ ನಡೆದಂತಾಯಿತು. ಇನ್ನು ತಡಮಾಡಿದರೆ ಅಳಿಯನು ಕೇಳುವಂತಿಲ್ಲ. ರೂಪಾಯಿಗಳನ್ನು ಕಳುಹಿಸಿರುವನು." ಎಂದು ಯೋಚಿಸುತ್ತ, ಒಳಗೆ ಹೋಗಿ ಅತ್ತಿಗೆಯನ್ನು ಕರೆದು:—"ಅಮ್ಮಾ, ಅಳಿಯನು ಕಾಗದವನ್ನು ಬರೆದಿದ್ದಾನೆ; ಜಾಗ್ರತೆ ಹೆಂಡತಿ-ಮಗುವನ್ನು ಕರೆದುಕೊಂಡು ಹೋಗಿಬಿಡಬೇಕಂತೆ. ಬಹಳ ದಿವಸಗಳಾದವು ಕರಕೊಂಡು ಹೋಗೋಣವೆ"ಂದನು. ಅದಕ್ಕೆ ಅತ್ತಿಗೆಯು ಎಂದಾದರೂ ಒಂದು ದಿವಸ ಒಳ್ಳೇ ಮುಹೂರ್ತ ನೋಡಿ,

ನಲ್ಲ:—“ಅಳಿಯನೆಂದರೆ, ಈತನಿಗೇ ಅನ್ನಬೇಕು. ನೋಡಿದೆಯಾ ಎಷ್ಟು ದಾಕ್ಷಿಣ್ಯ (ಭಿಡೆ)? ಇನ್ನು ಐದಾರು ತಿಂಗಳು ತನಗೆ ಪಿರಾವು ಇಲ್ಲವಂತೆ; ಅದಕ್ಕಾಗಿ, ಹೆಂಡತಿ-ಮಕ್ಕಳು ಅಲ್ಲಿಯೇ ಇರಲಿ. ತಿಂಗಳಿಗೆ ಇಪ್ಪತ್ತು ರೂಪಾಯಿಗಳಂತೆ ಕಳುಹಿಸುತ್ತೇನೆ” ಎಂದು ಪತ್ರ ಬರೆದಿರುವನು. ಭಲೆ! ತುಂಬಾ ಸಂತೋಷವಪ್ಪಾ. ಹೀಗಾದರೆ ನಮ್ಮ ಮಗಳು ನಮ್ಮ ಮನೆಯಲ್ಲಿಯೇ ಇರಲಿ. ಯಾರದೇನು ಹೋಯಿತು? ಮುಖ್ಯವಾಗಿ ನಮ್ಮ ಸಂಸಾರವೂ ನಡೆದಂತಾಯಿತು. “ಊರ ಅಕ್ಕಿ, ಊರ ಬೇಳೆ, ನೀನೂ ಊಟ ಮಾಡಿಕೊಂಡು ಹೋಗ ಮಾರವ್ವ, ಮಿಕ್ಕದ್ದು ಸಕ್ಕದ್ದು ನಾವೂ ಊಟ ಮಾಡುವೆವು” ಎಂಬ ಗ್ರಾಮ್ಯ ಜನರ ಉಕ್ತಿಯನ್ನು ಮನಸ್ಸಿನಲ್ಲಿ ಚಿಂತಿಸುತ್ತ ಆಚಾರಿಯು ಒಳಹೊಕ್ಕನು.

ತಾಯಿಗೂ, ಮಗಳಿಗೂ ಈ ರೂಪಾಯಿಗಳ ಸಮಾಚಾರದ ಹೊರತಾಗಿ ಮಿಕ್ಕ ಸಮಾಚಾರಗಳನ್ನೆಲ್ಲ ಒಂದಕ್ಕೆ ಎರಡರಂತೆ ತಿಳಿಸಿದನು. ಈ ಮಾತನ್ನು ಕೇಳಿ ಸೀತಾಂಬೆಯು:—“ಇನ್ನೂ ಐದು ತಿಂಗಳು ಇಲ್ಲಿಯೇ ಇರಬೇಕೇ!!” ಎಂದು ಯೋಚನೆ ಮಾಡತೊಡಗಿದಳು. ಹೀಗಿರಲು, ಮೂರು ನಾಲ್ಕು ದಿವಸಗಳಲ್ಲಿ ಗಂಡನಿಂದ ಬಂದ ತನ್ನ ಹೆಸರಿನ ಕಾಗದವನ್ನು ನೋಡಿ ಬಹು ಸಂತೋಷದಿಂದ ಓದತೊಡಗಿದಳು. ಅದರಲ್ಲಿ ತಿಂಗಳಿಗೆ ಇಪ್ಪತ್ತು ರೂಪಾಯಿಗಳನ್ನು ಕಳುಹಿಸುವೆನೆಂದು ಬರೆದಿತ್ತು. ಈ ವಿಷಯವನ್ನು ತಾಯಿಯ ಮುಂದೆ ತಿಳುಹಿದಳು. ಅದಕ್ಕೆ ತಾಯಿಯು ಆವ್ಮಾ:—ನಿಮ್ಮ ಚಿಕ್ಕಪ್ಪನು ಸಾಮಾನ್ಯನೆಂದು ತಿಳಿಯಬೇಡ ಕಳ್ಳರೊಳಗೂ, ಸುಳ್ಳರೊಳಗೂ, ಮೋಸಗಾರರೊಳಗೂ ಮೊದಲನೆಯವನು; ಹುಡುಗಿ, ನಿನಗೇನು ತಿಳಿಯುವದು? ನೋಡಿದೆಯಾ, ರೂಪಾಯಿಗಳನ್ನು ಕಳುಹಿಸುತ್ತಾರೆಂದು ಹೇಳಲೇ ಇಲ್ಲವಲ್ಲ! “ಇಷ್ಟು ಅವಸರವೇಕೆ, ಮಗಳು ಇನ್ನೂ ಐದು ತಿಂಗಳು ನಮ್ಮಲ್ಲೇ ಇರಲಿ.’ ಎಂದನಲ್ಲ? ಇದರಲ್ಲೇನೋ ಕೌತುಕವಿದ, ಎಂದು ನನಗೆ

ಆ ದಿವಸವೇ ಅನುಮಾನವಾಯಿತು, ಅಮ್ಮಾ, ನಿಮ್ಮ ಚಿಕ್ಕಪ್ಪನ ಮಹಿಮೆಯು ಇಷ್ಟೇ ಇಲ್ಲ; ಈ ದಿವಸ ಹೇಳುವೆನು; ಕೇಳು. ಎಂದು ವಿಸ್ತಾರವಾಗಿ ಹಿಂದಿನ ಚರಿತ್ರೆಯನ್ನೆಲ್ಲ ಹೇಳಿದಳು. ಸೀತಾಂಬೆಗೆ ಇದನ್ನೆಲ್ಲ ಕೇಳಿ, ತಕ್ಕನು ಎಷ್ಟು ಮೋಸಗಾರನೆಂದು ಮನಸ್ಸಿನಲ್ಲಿ ಸ್ವಲ್ಪ ಯೋಚನೆಯೂ, ಸ್ವಲ್ಪ ಅಸನಂದಿಗೆಯೂ ಹುಟ್ಟಿತು; ಆದರೂ ಬುದ್ಧಿವಂತಳಾದ್ದರಿಂದ ಆಕೆಯು ಇದನ್ನು ಒಬ್ಬರಿಗೂ ತಿಳಿಯಗೊಡಲಿಲ್ಲ.

ಇತ್ತ ವರದಾಚಾರಿಯು ತನ್ನ ಸ್ಥಳಾಂತರದ ಕೆಲಸವನ್ನು ಮುಗಿಸಿಕೊಂಡು ಪುನಃ ಪುಣ್ಯೇಶನಗರದ ಪೂರ್ವದ ಕೆಲಸಕ್ಕೆ ಹಾಜರಾದನು. ಒಡನೆ ಆತನು ತನ್ನ ಮಾವನಿಗೆ:—ನೀವು ನನ್ನ ಹೆಂಡತಿ-ಮಕ್ಕಳನ್ನು ಕರೆದುಕೊಂಡು ಬರಬೇಕು. ನಾನು ಬರಲು ರಜೆಯು ಸಿಕ್ಕುವದಿಲ್ಲ. ದಾರಿಯ ಖರ್ಚಿಗಾಗಿ ಐವತ್ತು ರೂಪಾಯಿಗಳನ್ನು ಕಳುಹಿಸಿರುವೆನು; ಎಂದು ಕಾಗದ ಬರೆದು ಆ ದಿವಸ ಹಣ ಮನಿಯಾರ್ಡರ್ ಮಾಡಿ ಕಳುಹಿಸಿದನು. ಇಲ್ಲಿ ಸೀತಾಂಬೆಯು:—"ನಾಲ್ಕೈದು ತಿಂಗಳಾದವಲ್ಲ!! ಯಾವಾಗ ಊರಿಗೆ ಹೋಗುವದು?" ಎಂದು ಯೋಚಿಸುತ್ತಲೇ ಇದ್ದಳು. ಗೋವಿಂದಾಚಾರಿಗೆ ಮಗಳು ಪತಿಯ ಮನೆಗೆ ಹೋಗುವದೇ ಇಷ್ಟವಿದ್ದಿಲ್ಲ ನೋಡಿದಿರಾ! ದ್ರವ್ಯಪಿಶಾಚಿಯ ಸಾಮರ್ಥ್ಯವನ್ನು? ಅಷ್ಟರಲ್ಲಿ ವರದಾಚಾರಿಯ ಕಾಗದವು ಬಂದು ತಲ್ಪಿತು; ರೂಪಾಯಿಗಳೂ ಬಂದವು. ಆಚಾರಿಯು ಓದಿಕೊಂಡು, "ನಡೆದಷ್ಟು ದಿವಸ ನಡೆದಂತಾಯಿತು. ಇನ್ನು ತಡಮಾಡಿದರೆ ಅಳಿಯನು ಕೇಳುವಂತಿಲ್ಲ. ರೂಪಾಯಿಗಳನ್ನು ಕಳುಹಿಸಿರುವನು." ಎಂದು ಯೋಚಿಸುತ್ತ, ಒಳಗೆ ಹೋಗಿ ಅತ್ತಿಗೆಯನ್ನು ಕರೆದು:—"ಅಮ್ಮಾ, ಅಳಿಯನು ಕಾಗದವನ್ನು ಬರೆದಿದ್ದಾನೆ; ಜಾಗ್ರತೆ ಹೆಂಡತಿ-ಮಗುವನ್ನು ಕರೆದುಕೊಂಡು ಹೋಗಿಬಿಡಬೇಕಂತೆ. ಬಹಳ ದಿವಸಗಳಾದವು ಕರಕೊಂಡು ಹೋಗೋಣವೆ"ಂದನು. ಅದಕ್ಕೆ ಅತ್ತಿಗೆಯು ಎಂದಾದರೂ ಒಂದು ದಿವಸ ಒಳ್ಳೇ ಮುಹೂರ್ತ ನೋಡಿ,

ಹೊಸ ಸೀರೆ-ಕುಪ್ಪುಸ ತಂದು, ಉಡಿ ತುಂಬಿದ ಮೇಲೆ ಕಳಿಸಲಿಕ್ಕೆ ಅಡ್ಡಿ ಯೇನೂ ಇರುವದಿಲ್ಲವೆ''ಂದಳು. ಆಗ ಗೋವಿಂದಾಚಾರಿಯು ಮನಸ್ಸಿನಲ್ಲಿ:—"ಸೀರೆ ಜೀರೆ ಆಗಬೇಕೇ? ಸರಿ. ಇಪ್ಪತ್ತು ರೂಪಾಯಿಗಳಿಗೆ ಧ್ವಂಸ ಬಂತು ಇದರ ಮೇಲೆ ಔತನ ಬೇರೆ! ಅವನು ಕಳುಹಿಸಿದ ರೂಪಾಯಿಗಳನ್ನು ಖರ್ಚ ಮಾಡೋಣವೆಂದರೆ, "ಬರುವಾಗ ಮೂರನೇ ತರಗತಿಯ ಗಾಡಿಯಲ್ಲಿ ಬಹು ಗಲಾಟೆ; ಇದ್ದರಿಂದ ಮೊದಲನೇ ತರಗತಿಯ ಗಾಡಿಯಲ್ಲಿ ಬರಬೇಕೆ''ಂದು ಬರೆದಿದ್ದಾನೆ ಅಯ್ಯೋ, ಪ್ರಾಣ ಸಂಕಟವಾಯಿತಲ್ಲ!'' ಎಂದು ಯೋಚಿಸಿ, "ಒಳ್ಳೇದು, ಹೋಗುವಾಗ ಮೊದಲನೇದೂ ಬೇಡ, ಮೂರನೇದೂ ಬೇಡ, ಎರಡನೆ ತರಗತಿಯಲ್ಲಿ ಹೋದರೆ, ಕೆಲವು ರೂಪಾಯಿಗಳು ಉಳಿದಂತೆ ಆಗುತ್ತವೆ. ಇನ್ನು ಕೆಲವು ನಮ್ಮಿಂದ ಹೋಗಲಿ. ಕೊಡುವ ದೇವರು ಹ್ಯಾಗಾದರೂ ಕೊಟ್ಟಾನು'' ಎಂದು ನಿರ್ಧರಿಸಿದನು.

ಕೂಡಲೆ ಅಂಗಡಿಗೆ ಹೋಗಿ, ಒಂದು ಒಳ್ಳೇ ಸೀರೆ-ಕುಪ್ಪುಸಖಣಗಳು ಇವೆಲ್ಲ ತಂದು ಅತ್ತಿಗೆಯ ವಶಕ್ಕೆ ಕೊಟ್ಟನು. ಆಕೆಯು ಸುಮುಹೂರ್ತ ನೋಡಿಸಿ, ಒಳ್ಳೆಯ ದಿವಸದಲ್ಲಿ ಕೆಲವು ಮುತ್ತೈದೆಯರನ್ನು ಕರೆದು ಅವರ ಕೈಯಿಂದ ಮಗಳಿಗೆ ಸೀರೆ ಕುಪ್ಪುಸ ಇವುಗಳನ್ನು ಕೊಡಿಸಿ ಉಡಿ ತುಂಬಿಸಿ, ಮಗಳನ್ನು ತಮ್ಮವರೆಲ್ಲರ ಮನೆಗೂ ಕರೆದುಕೊಂಡು ಹೋದಳು. ಅವರೆಲ್ಲರೂ ಮಾನಮಾಡಿ ಮಂಗಳದ್ರವ್ಯಗಳನ್ನು ಕೊಟ್ಟು ಆಶೀರ್ವಾದವ ಮಾಡಿದರು. ಅನಂತರ ಸೀತಾಂಬೆಯು ಮನೆಗೆ ಬಂದು ಚಿಕ್ಕಪ್ಪನಿಗೆ ನಮಸ್ಕಾರ ಮಾಡಿದಳು; ಅಷ್ಟರೊಳಗೆ ಚಿಕ್ಕಪ್ಪನೂ ಮುಹೂರ್ತವನ್ನು ನಿಶ್ಚೈಸಿದ್ದನು. ಆ ದಿವಸವೇ ಔತನವಾಯಿತು. ಜನರಂಜನೆಗೋಸ್ಕರ ಕೆಲ-ಕೆಲವು ಜನರನ್ನು ಊಟಕ್ಕೆ ಕರೆದಿದ್ದನು. ಇಷ್ಟು ಮಾಡಿದ್ದೇ ಗೋವಿಂದಾಚಾರಿಗೆ ಅಶ್ವಮೇಧಯಜ್ಞ ಮಾಡಿದಂತಾಯಿತು. ನಾಲ್ಕಾಣೆ ಕೊಟ್ಟು ಒಂದು ಕುಂಟೆತ್ತಿನ ಗಾಡಿಯನ್ನು

ತಂದು ನಿಲ್ಲಿಸಿದನು. ಸೀತಾಂಬೆಯು ತಲೆ ಬಾಚಿಕೊಂಡು, ಸೊಗಸಾದ ಹೂವಿನ ಮೊಗ್ಗೆಗಳ ಮಾಲೆಯನ್ನು ತಲೆಯಲ್ಲಿ ಮುಡಿದು ಒಡವೆಗಳನ್ನೆಲ್ಲ ಧರಿಸಲು ಪೆಟ್ಟಿಗೆ ತೆಗೆದು ನೋಡಿದಳು. ಎಲ್ಲಾ ಒಡವೆಗಳು ಇದ್ದವು; ಆದರೆ ಒಂಕಿಯು ಜೊತೆಯು ಮಾತ್ರ ಇದ್ದಿಲ್ಲ ದೊಡ್ಡ ಮಾಲು ಸೀತಾಂಬೆಯು ಹೆದರಿದಳು!! ತಾಯಿಯನ್ನು ಕರೆದು ಈ ಸಂಗತಿಯನ್ನು ಕೂಗಲೆ ತಿಳಿಸಿದಳು. ಆಗ ತಾಯಿಯು ಮಗಳನ್ನು ಕುರಿತು:—"ಅಮ್ಮಾ, ದುಃಖವೇಕೆ! ಇವೆಲ್ಲ ಹೋಗಿದ್ದರೆ ಏನು ಮಾಡುತ್ತಿದ್ದೆ? ಇಷ್ಟು ಉಳಿದದ್ದೇ ನಿನಗೆ ಲಾಭ. ಯೋಚನೆ ಮಾಡಬೇಡಮ್ಮಾ! ನಿಶ್ಚಯವಾಗಿ ನಿಮ್ಮ ಚಿಕ್ಕಪ್ಪನೇ ತೆಗೆದಿರುವನು. ಇಲ್ಲದಿದ್ದರೆ ಅವನಿಗೆ ಇಷ್ಟು ದುಡ್ಡು ಎಲ್ಲಿಂದ ಬರಬೇಕು? ನೋಡಿದೆಯಾ! ಸೀರೆ ಕುಪ್ಪಸಗಳು; ಇಷ್ಟು ಜನರ ಸಂತರ್ಪಣೆ ಆದದ್ದಾಯಿತು. ಹೊರಡುವ ಕಾಲದಲ್ಲಿ ಪೇಚಾಡಬೇಡವಮ್ಮಾ! ಎಂದು ಸಂತೈಸಿದಳು.

ಸೀತಾಂಬೆಯು ಬುದ್ಧಿವಂತೆಯಾದ್ದರಿಂದ ಆ ದುಃಖವನ್ನು ತೊರೆದು, ಮಿಕ್ಕ ಒಡವೆಗಳನ್ನು ಧರಿಸಿ ಕೆಲವು ಒಡವೆಗಳನ್ನು ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿ ತನ್ನಲ್ಲಿಯೇ ಬೀಗದ ಕೈಯನ್ನಿಟ್ಟುಕೊಂಡಳು. ಅಷ್ಟರಲ್ಲಿ ಅಜ್ಜಿಯು ಮೊಮ್ಮಗನನ್ನೆತ್ತಿಕೊಂಡು ಚಿಕ್ಕ ಒಡವೆಗಳನ್ನಿಟ್ಟು ಆಡಿಸುವಳು, ಮುದ್ದಿಸುವಳು, ಹೀಗೆ ಬಹುವಿಧವಾಗಿ ಪ್ರೀತಿಯನ್ನು ಹೊರಪಡಿಸುತ್ತಿದ್ದಳು. ಮುಹೂರ್ತ ಮೀರುವದೆಂದು ಗೋವಿಂದಾಚಾರಿಯು ಅವಸರ ಮಾಡಿದನು. ಅದರಂತೆಯೇ ಸೀತಾಂಬೆಯು ತಾಯಿಗೆ ನಮಸ್ಕರಿಸಿ, ಮಗುವನ್ನೆತ್ತಿಕೊಂಡು ಹೊರಕ್ಕೆ ಹೊರಟಳು. ಅಷ್ಟರಲ್ಲಿಯೇ ನೆರೆಮನೆಯ ಒಬ್ಬ ಸ್ನೇಹಿತಳಾದ ಸಕೇಶಿಯು ಗಂಡನ ಮನೆಗೆ ಹೊರಟಿರುವಳೆಂದು ತಿಳಿಯದೆ, "ಇದೇನೆ ಸೀತೆ, ಹೊಸ ಸೀರೆಯನ್ನುಟ್ಟು, ಹೊಸ ನಗಗಳನ್ನಿಟ್ಟು, ಮಗುವನ್ನು ಎತ್ತಿಕೊಂಡು ಎಲ್ಲಿಗೆ ಹೊರಟೆ" ಎಂದು ಮಾತನಾಡುತ್ತ ಇದುರಿಗೆ ಬಂದಳು. ಆಗ ಸೀತಾಂ

ದನು ಅಷ್ಟರಲ್ಲಿ ರೈಲು ಬಂತು ಬಹು ಗಲಾಟೆ, ಇಳಿದ ಜನಗಳ ಗುಲ್ಲು, ಗಾಡಿ ಹತ್ತುವವರ ನೊಲ್ಲು ಇವುಗಳಿಂದ ಆ ಸ್ಥಳವೆಲ್ಲ ಶಬ್ದಾಯಮಾನವಾಗಿತ್ತು. ಆಗ ಗೋವಿಂದಾಚಾರಿಯು ಬಹು ಗಾಬರಿಯಿಂದ:- “ಅಮ್ಮಾ ಹೋಗೋಣ ನಡೆ” ಎಂದು ಗಂಟುಗಳನ್ನು ಹೊತ್ತುಕೊಂಡು ಓಡಲಾರಂಭಿಸಿದನು ಆಗ ಸೀತಾಂಬೆಯೂ ಮಗುವನ್ನು ಎತ್ತಿಕೊಂಡು ಆದ ಮಟ್ಟಿಗೆ ವೇಗವಾಗಿ ನಡೆದಳು. ಇಬ್ಬರೂ ಕ್ಲುಪ್ತವಾದ ಗಾಡಿಯಲ್ಲಿ ಕುಳಿತರು. ಅಲ್ಲಿ ಗದ್ದಲವೇನೂ ಇದ್ದಿಲ್ಲ. ಸೀತಾಂಬೆಯು ಮಗುವನ್ನಾಡಿಸುತ್ತ ವಿರಾಮವಾಗಿ ಕುಳಿತುಕೊಂಡಳು. ಆಚಾರ್ಯನೂ ಗಾಡಿಯ ಬಳಿಯಲ್ಲಿ ನಿಂತಿದ್ದನು.

---

೪ನೆಯ ಪ್ರಕರಣ.

## ವಿವೇಕೋದಯ.



ಶೌಕ್ತುಲಾ ಪಠಾಣನು ತನ್ನ ಸ್ನೇಹಿತರಿಬ್ಬರನ್ನು ಕುರಿತು:—“ಮಹಾರಾಜ, ಆ ಕುರ್ಚಿಯ ಮೇಲೆ ಕುಳಿತಿದ್ದ ತರುಣೀಮಣಿಯನ್ನು ನೋಡಿದಿರಾ?” ಎಂದು ಕೇಳಿದನು. ಅವರು ‘ನಾವು ನೋಡಲಿಲ್ಲ’ವೆಂದರು. ಪಠಾಣನು, “ಛಿ-ಛಿ, ನಿಮ್ಮ ಕಣ್ಣುಗಳಿದ್ದದ್ದಕ್ಕೇನು ಫಲ? ನೋಡತಕ್ಕ ಪದಾರ್ಥವನ್ನು ನೋಡಲಿಲ್ಲವಲ್ಲಾ! ಒಳ್ಳೇದಾಯಿತು; ಈಗಲಾದರೂ ಬನ್ನಿ, ಅವರು ಕುಳಿತಿರುವ ಗಾಡಿಯನ್ನೇ ನಾವೂ ಹತ್ತೋಣ”ವೆಂದು ಕೊಳ್ಳುತ್ತಾ ವೇಗವಾಗಿ ತೆರಳಿದನು. ಸ್ನೇಹಿತರೂ ಜೊತೆಗೆ ನಡೆದರು. ಎರಡನೇ ತರಗತಿಯ ಗಾಡಿಗಳನ್ನೆಲ್ಲ ಹುಡುಕಿದರು. ಕೊನೆಗಾಡಿಯ ಬಳಿಯಲ್ಲಿ ಗೋವಿಂದಾಚಾರಿಯನ್ನು ನೋಡಿ, ಓಹೋ! ಇಲ್ಲಿಯೇ ಇರಬಹುದೆಂದು ತಿಳಿದು ಅಲ್ಲಿಗೆ ಬಂದು ಸೇರಿದರು. ಆ ಪಠಾಣರು ಆಚಾರಿ

ಯನ್ನು ಲಕ್ಷ್ಯವಾಡದೆ, ಒಳಗೆ ಪ್ರವೇಶಿಸಿ ಕುಳಿತುಕೊಂಡರು. ಇವರು ಒಳಗೆ ಹೋದದ್ದನ್ನು ನೋಡಿ, ಗೋವಿಂದಾಚಾರಿಯೂ ಒಳಗೆ ನುಗ್ಗಿ ತನ್ನ ಮಗಳ ಬಳಿಯಲ್ಲೇ ಮಾತನಾಡುತ್ತ ಕುಳಿತನು. ಅಷ್ಟರಲ್ಲಿ ಗಾಡಿಯೂ ಮುಂದಕ್ಕೆ ತೆರಳಿತು.

ಆ ಪಠಾಣನು ಎದುರಿಗೆ ಕುಳಿತಿರುವ ತರುಣೀಮಣಿಯನ್ನು ತನ್ನ ಸ್ನೇಹಿತರಿಗೆ ತೋರಿಸಿ "ನೋಡಿದಿರಾ, ಎಷ್ಟು ರೂಪವತಿ! ನಾನೂ ಅನೇಕ ದೇಶಗಳನ್ನು ಸುತ್ತಿರುವೆನು; ಆದರೂ ಇಂಥಾ ಯುವತಿಯನ್ನೆಲ್ಲಿಯೂ ನೋಡಲೇ ಇಲ್ಲ. ಅದರಲ್ಲೂ, ಈ ದೇಶದ ಜನರಲ್ಲಿ ನಾಗರಿಕತೆ ಹೆಚ್ಚು; ಮತ್ತು ಹೆಂಗಸರು ಉಡಿಗೆ ತೊಡಿಗೆಗಳಲ್ಲಿ ಬಹು ನಿಪುಣೆಯರು; ಈ ಜಾತಿಯವರಂತೂ ಹೇಳಲೇ ಕೆಲಸವಿಲ್ಲ; ಕಥೆಯಾತಕ್ಕೆ? ನೋಡಿದಿರಾ ಉಡುಪು ಹೇಗಿದೆ? ನಮ್ಮ ಜನರು ಮಂಗಗಳಂತೆ ಸುತ್ತಿಕೊಳ್ಳುತ್ತಾರೆ ಪ್ರಯೋಜನವೇನು? ಆ ನಾಗರಿಕತೆಯ ಮಹಿಮೆಯನ್ನು ನೋಡಿರಿ! ಅಂಚುಗಳೆಲ್ಲಾ ಮೇಲೆಯೇ ಕಾಣುವಂತೆ ಉಟ್ಟಿರುವಳಲ್ಲ! ಮತ್ತೂ ನೋಡಿರಿ; ಸೆರಗನ್ನೆಷ್ಟು ಅಂದವಾಗಿ ಭುಜದ ಮೇಲೆ ಹಾಕಿರುವಳು! ಒಡವೆಗಳನ್ನು ನೋಡಿದಿರಾ? ಹೆಚ್ಚಾಗಿ ಕವಲತ್ತುಗಳಂತೆ ಮೈತುಂಬ ಇಳಿಹಾಕದೆ, ಒಂದೇ ಚಂದ್ರಹಾರವನ್ನು ಹಾಕಿರುವಳು. ಅದು ಕುತ್ತಿಗೆಗೆ ಎಷ್ಟು ಅಂದವಾಗಿದೆ? ಹೂ ಮುಡಿದಿರುವ ರೀತಿಯನ್ನು ನೋಡಿದಿರಾ! ನೋಟದಲ್ಲೆಷ್ಟು ಸೊಬಗು! ಒರಟರಾದ ಬೇರೆ ತರುಣಿಯರನ್ನು ಈ ಕನ್ಯಾರತ್ನದ ಮೇಲೆ ನಿವಾಳಿಸಿದರೂ ದೋಷವಿಲ್ಲ. ಹತ್ತಿರ ಕುಳಿತಿರುವ ತಿರುಕನಂತಿರುವ ಈ ಪುರುಷನು ಯಾರಿರಬಹುದು? ಇವನೂ ಇವರ ಜಾತಿಯವನಂತೆ ಕಾಣುತ್ತಾನೆ. ಯಾವ ಗ್ರಾಮಕ್ಕೆ ಹೋಗುವರೋ, ಇನ್ನೂ ಕೆಲವು ವಿಷಯಗಳನ್ನು ಇವನ ಸಂಗಡ ವಿಚಾರಿಸಿ ತಿಳಿಯಬೇಕು" ಎಂದನು.

ಈ ಮಾತುಗಳನ್ನು ಕೇಳಿ ಸ್ನೇಹಿತರು:—ಎನಮ್ಮ ಗುಲಾಂಖಾನ್

ಇವಳಲ್ಲಿ ನಿನಗೆ ತುಂಬಾ ಪ್ರೀತಿ ಇದ್ದಂತೆ ಕಾಣುತ್ತದೆ; ಇವರು ಬ್ರಾಹ್ಮಣರಲ್ಲವೆ? ಹ್ಯಾಗೆ ನಿನಗೆ ದೊರಕ್ಯಾರು? ಎಂದರು. ಅದಕ್ಕೆ ಗುಲಾಂಖಾನನು:—“ಏನು ಹೇಳಿದಿರಯ್ಯ? ಬ್ರಾಹ್ಮಣರು ಹ್ಯಾಗೆ ಸಾಧ್ಯ ವಾದಾರೆಂದೇ? ಎಲ್ಲ ಜನರ ಅಪ್ಪನಂತಿರುವ ದ್ರವ್ಯವನ್ನು ಚೆಲ್ಲಿದರೆ, ಇವರ ಅಜ್ಜನೂ ನಾಯಿಯಂತೆ ನಮ್ಮ ಮನೆಯು ಬಳಿಗೆ ಬಂದು ಬೀಳು ವನು. ಆದರಲ್ಲೂ ಈ ಜನರು ಹೇಗೆಂದರೆ ಹಾಗೆ; ಬಹು ಪರೋಪಕಾರಿ ಗಳು. ಹೆಚ್ಚಿಗೆ ಹೇಳಿಯೇನು? ಇವಳ ಹತ್ತಿರ ಕುಳಿತಿರುವವನು ಪ್ರಕೃತ ದಲ್ಲಿ ಇವಳ ರಕ್ಷಕನಂತೆ ತೋರುವನು. ಇವನೊಬ್ಬನು ಒಡಂಬಟ್ಟರೆ ಎಷ್ಟು ದ್ರವ್ಯ ಹೋದರೂ ಇವಳನ್ನು ಬಿಡಲಿಕ್ಕಿಲ್ಲವೆಂದನು ಈ ಪಠಾಣ ರಿಗೆ ಕರ್ನಾಟಕ ಭಾಷೆಯು ಚನ್ನಾಗಿ ಬಾರದ್ದರಿಂದ ಅವರು ತಮ್ಮ ಭಾಷೆ ಯಲ್ಲಿಯೇ ಮಾತನಾಡಿಕೊಂಡರು. ಸೀತಾಂಬೆಗಂತೂ ಅವರ ಭಾಷೆಯ ಪರಿಚಯವೇ ಇದ್ದಿಲ್ಲ; ಆದರೂ ಆಕೆಯು ದುಶ್ಶಕುನಗಳ ವಿಚಾರಮಾಡಿ, ತಮ್ಮ ಗ್ರಾಮಕ್ಕೆ ಸೇರುವವರೆಗೂ ದೇವರೇ ತನ್ನನ್ನು ಪಾರುಮಾಡಬೇ ಕೆಂದು ಭಗವಂತನನ್ನು ಪ್ರಾರ್ಥಿಸುತ್ತಿದ್ದಳು. ತಾನು ಹೊರಡುವದಕ್ಕೆ ಮುಂಚೆ ಗಂಡನಿಗೆ ಒಂದು ಕಾಗದ ಬರೆದಿದ್ದಳು. ಅದರಲ್ಲಿ ಇಂಥಾ ದಿವಸ ಅಲ್ಲಿಗೆ ಬರುವೆನೆಂದು ಸೂಚಿಸಿದ್ದಳು. ಆದ್ದರಿಂದ ಯಾವಾಗ ತಮ್ಮೂ ರಿಗೆ ಹೋದೇನೋ, ಗಾಡಿಯು ಬಳಿಗೆ ಬಂದಿರುವ ತನ್ನ ಪತಿಯ ಮುಖ ವನ್ನು ಯಾವಾಗ ನೋಡೇನೋ ಎಂಬದೊಂದೇ ಯೋಚನೆಯು ಸೀತಾಂ ಬೆಯನ್ನು ನುಂಗಿಬಿಟ್ಟಿತ್ತು.

ಗೋವಿಂದಾಚಾರಿಯು ಪಠಾಣರ ಮಾತುಗಳನ್ನೆಲ್ಲ ಕೇಳುತ್ತಾ ಕುಳಿತಿದ್ದನು. ಪಠಾಣನು ದೊಡ್ಡ ಸಾವುಕಾರನೆಂದೂ ತಿಳಿದನು. ಆ ಪಠಾಣನಿಗೆ ತನ್ನ ಮಗಳ ಮೇಲೆ ತುಂಬಾ ಪ್ರೀತಿ ಇರುವದೆಂದೂ ಆಚಾರಿಗೆ ಗೊತ್ತಾಯಿತು; ಮತ್ತು ಪಠಾಣರು ಸ್ಪಷ್ಟವಾಗಿ ತಮ್ಮೊ ಳಗೇ ಮಾತನಾಡಿಕೊಂಡಿದ್ದನ್ನೂ ಕೇಳಿದ್ದನು. ಆತನು ಮನಸ್ಸಿನಲ್ಲಿ:—

ಸರಿ, ಇದೇನೋ ಒಂದು ನನಗೆ ಅನುಕೂಲ ಕಾಲವೆಂದು ಕಾಣುತ್ತದೆ; ಆದರೆ ನಾನು ಅಳಿಯನ ಮಟ್ಟಿಗೆ ದ್ರೋಹಿಯಾಗುವೆನು. ಅವನಿಂದ ನನಗೇನಾದರೂ ತೊಂದರೆ ಬರಬಹುದು. ಏನು ಮಾಡೋಣವೆಂದು ಯೋಚಿಸಿ, ಮಾಡುವ ಕೆಲಸ ಮಾಡಿಬಿಟ್ಟು, ತಾನು ತಪ್ಪಿಸಿಕೊಳ್ಳಲಿಕ್ಕೆ ಬೇರೆ ಉಪಾಯ ಮಾಡಿದರಾಯಿತೆಂದು, ಉಪಾಯವನ್ನೂ ನಿರ್ಧರಿಸಿದನು.

ಅನಂತರ ಆಚಾರಿಯು ಪಠಾಣನನ್ನು ನೋಡಿ 'ಸಲಾಂ ಸಾಹೇಬ, ತುಮಾರೆ ಗಾವ್ ಕಹಾ ಹೈ' ಇತ್ಯಾದಿ, ಹಿಂದುಸ್ಥಾನೀ ಭಾಷೆಯಿಂದಲೇ ಮಾತನಾಡಲಾರಂಭಿಸಿದನು. ಈ ಬ್ರಾಹ್ಮಣನಿಗೆ ಹಿಂದುಸ್ಥಾನೀ ಭಾಷೆಯು ಬರುತ್ತದೆಂಬುದು ಗುಲಾಂಖಾನನಿಗೆ ಗೊತ್ತಾಯಿತು. ಆತನು ಮನಸ್ಸಿನಲ್ಲಿ:—ನಾವು ಆಚಾರಿಗೆ ಕೇಳುವಂತೆಯೇ ಮಾತನಾಡಿದೆವು. ಇವನ ವಿಷಯವಾಗಿ ನಾವಿಷ್ಟು ಕ್ರೂರವಾಗಿ ಮಾತನಾಡಿದರೂ ಈತನು ಈ ರೀತಿ ನಮ್ಮೊಡನೆ ಸೌಮ್ಯವಾಗಿ ಮಾತನಾಡುತ್ತಾನೆ. ಅಂದಬಳಿಕ ಈತನು ನಮ್ಮ ದಾರಿಗೆ ಬರುವಂತೆ ಕಾಣುತ್ತಾನೆ ಇರಲಿ, ಇವನನ್ನು ಕ್ರಮವಾಗಿ ವಿಚಾರಿಸೋಣ, ಎಂದು ನಿರ್ಧರಿಸಿ:—ಏನು ಆಚಾರ್ಯರೆ, ನಮ್ಮ ಗ್ರಾಮವು ಇನ್ನೇನು, ಬಂತು. ಇನ್ನು ಮೂರು-ನಾಲ್ಕು ಸ್ಟೇಶನ್ನುಗಳಿರಬಹುದು ಅಷ್ಟೇ. ನೀವೆಲ್ಲಿಗೆ ಹೋಗುವಿರಿ? ಈ ಹುಡುಗೆಯು ನಿಮಗೇನಾಗಬೇಕು? ಎಂದನು. ಇವರ ಮಾತುಗಳೆಲ್ಲ ಹಿಂದುಸ್ಥಾನೀ ಭಾಷೆಯಲ್ಲಿ ಪ್ರಾರಂಭವಾದವು ಅದಕ್ಕೆ ಆಚಾರಿಯು "ನಾವು ಪುಣ್ಯೇಶ ನಗರಕ್ಕೆ ಹೋಗುವವಂದ್ದೇವೆ; ಇವಳು ನಮ್ಮ ಬಂಧುಗಳ ಮಗಳು" ಎಂದನು. ಆ ಪಠಾಣರಲ್ಲಿ ಮುತ್ತೊಬ್ಬನು 'ಆಚಾರ್ರಿ' ಇವರು ಲಕ್ಷಾಧಿಕಾರಿಗಳು, ಮೇಲೆ ಬಹು ದೊಡ್ಡ ವ್ಯಾಪಾರ ಮಾಡುತ್ತಾರೆ. ಇವರು ತಮ್ಮ ಈ ಯುವತಿಯನ್ನು ಅಪೇಕ್ಷಿಸುವರು. ನೋಡಿರಿ, ಇದರಿಂದ ನಿಮಗೂ ಬಹು ಲಾಭವುಂಟು" ಎಂದನು. ಗುಲಾಂಖಾನನ ಮಾತಿನಿಂದ ಆಚಾರಿಯು ಮನಸ್ಸಿನಲ್ಲಿ ಅಂಕುರಿಸಿದ್ದ ದುರಾಶೆಯೆಂಬ ವಿಷದ

ಬಳ್ಳಿಯು, ಅವನ ಮಿತ್ರರ ಮಾತುಗಳೆಂಬ ನೀರೆರಜೋಣದರಿಂದ ಚಿಗುರಿ ಡುತ್ತಾ ಬಂತು. ಆಚಾರಿಯು ಧೈರ್ಯ ಮಾಡಿ:—ಹಾಗಾದರೆ ಏನು ಕೊಡುವಿರೆಂದು ಕೇಳಿದನು. ಅದಕ್ಕೆ ಪಠಾಣರು:—ಈಕೆಯನ್ನು ಮನೆಗೆ ತಂದು ಬಿಟ್ಟರೆ, ಎರಡುನೂರು ವರಹಗಳನ್ನು ಕೊಡುವೆವೆಂದರು. ಆಗ ಆಚಾರಿಗೆ "ಅತ್ಯಾಶೆ ಗತಿಗೆಡಿಸಿತೆ" ಂಬ ಗಾದೆಗೆ ಸರಿಯಾಗಿ ಇನ್ನೂ ಹೆಚ್ಚು ಹಣ ಕೇಳೋಣವೆಂದು ತೋರಿತು. ಇಷ್ಟರೊಳಗೆ ಆ ಪಠಾಣರ ಗ್ರಾಮವೂ ಬಂತು. ಆದರೂ ಅವರು ಇಳಿಯಲೇ ಇಲ್ಲ.

ಶನಿಯು ಕಾಲಿನಿಂದ ಒದೆಯುವಾಗ ಯಾರಿಗೆ ಬುದ್ಧಿ ಬಂದೀತು? ಆಚಾರಿಯು ಸ್ವಲ್ಪ ಯೋಚಿಸಿದಂತೆ ನಟಿಸಿ:—ಇನ್ನೂರು ವರಹವೆಂದರೆ ಬಹು ಕಡಿಮೆ ಮುನ್ನೂರಾದರೆ ನೋಡಿರಿ, ಅನುಕೂಲಿಸಬಹುದು, ಎಂದನು. ಗುಲಾಂಖಾನನಂತು ಕಾಮಾಂಧನಾಗಿ ಸರ್ವಸ್ವವನ್ನು ಕೊಡಲು ಸಿದ್ಧನಾಗಿದ್ದನು. ಆಚಾರಿಯು ಈ ಮಾತನ್ನು ಕೇಳಿ ಅವನಿಗೆ ಬಹು ಸಂತೋಷವಾಯಿತು ಈ ಸಂಗತಿಗಳ್ಯಾವವೂ ಸೀತಾಂಬೆಗೆ ತಿಳಿಯದು. ಅಯ್ಯೋ! ಪ್ರಾಣಿಗಳಿಗೆ ಯಾವ ಯಾವ ಕಾಲಗಳಲ್ಲಿ ಯಾವ ಯಾವ ಆಪತ್ತುಗಳು ಒರುತ್ತವೆಂಬದು ಯಾರಿಗೂ ತಿಳಿಯುವದಿಲ್ಲವಲ್ಲವೇ!!! ಆಚಾರಿಯು ಸೀತಾಂಬೆಯನ್ನು ಗುಲಾಂಖಾನನ ಮನೆಗೆ ಕಳಿಸುವದಕ್ಕಾಗಿ ಹಿಂತಿರುಗಬೇಕಾಯಿತು. ಹಿಂದಿರುಗುವದು ಎಲ್ಲ ಅನುಕೂಲವೆಂದು ಆತನು ಯೋಚಿಸಿದನು. ಇನ್ನೂ ಸ್ವಲ್ಪ ದೂರ ಹೋದ ಮೇಲೆ ಹ್ಯಾಗಿದ್ದರೂ ಇಳಿದು ಬೇರೆ ಗಾಡಿ ಹತ್ತಬೇಕಲ್ಲವೇ? ಇಲ್ಲಿ ಇವಳಿಗೇನಾದರೂ ಮೋಸ ಮಾಡಿ ಮತ್ತೆ ಹಿಂದಕ್ಕೆ ಒರುವದು ಒಳ್ಳೇದು ಎಂದು ಯೋಚಿಸಿ, ಆ ಪಠಾಣರಿಗೆ:—ನೀವು ಅಲ್ಲಿಯ ವರೆಗೆ ಬನ್ನಿರಿ, ಗಾಡಿಯಿಂದ ಇಳಿದ ಕೂಡಲೆ ನಮ್ಮ ಗ್ರಾಮದ ಕಡೆಗೇ ಬರುವ ಗಾಡಿ ಒಂದು ಹೊರಡುತ್ತದೆ. ನಿಮ್ಮಲ್ಲಿ ಯಾರಾದರೂ ಬೇಗನೆ ಟಿಕೀಟುಗಳನ್ನು ನಮ್ಮೆಲ್ಲರಿಗೂ ತಂದರೆ, ಅದೇ ಗಾಡಿಯಲ್ಲಿ ಹೊರಟು ನಿಮ್ಮೂರಿಗೆ

ಬರುವೆನು. ಆ ಸಂಬಂಧದ ದ್ರವ್ಯವನ್ನು ಈಗಲೇ ಕೊಡಬೇಕು, ಎಂದನು. ಆಗ ಗುಲಾಂಖಾನನು ತನ್ನಲ್ಲಿದ್ದ ದ್ರವ್ಯವನ್ನೆಲ್ಲ ಸೇರಿಸಿದರೂ ನೂರೈವತ್ತು ವರಹಗಳಾದವು. ಆತನು ಆಚಾರಿಗೆ:—ಇಷ್ಟು ನೀವು ಈಗ ತೆಗೆದುಕೊಳ್ಳಿರಿ, ಮಿಕ್ಕದ್ದನ್ನು ನಮ್ಮೂರಲ್ಲೇ ಕೊಡುವೆನು, ಎಂದು ಇದ್ದ ದ್ರವ್ಯವನ್ನು ಆಚಾರಿಗೆ ಕೊಟ್ಟನು ಆದಾದರೂ ಆ ಅನಾಥೆಗೆ ತಿಳಿಯಲಿಲ್ಲ ಅಯ್ಯೋ, ದುರದೃಷ್ಟವೇ!!! ಅಷ್ಟರಲ್ಲಿ ಇಳಿಯುವ ಸ್ಥಳವೂ ಸೀತಾಂಬೆಯು ವೃಶ್ಯದೇವತೆಯಂತೆ ಒಂದೊದಗಿತು.

ಸ್ಟೇಶನ್ನಿನಲ್ಲಿ ಗಾಡಿಯು ನಿಂತಕೂಡಲೆ ಎಲ್ಲರೂ ಇಳಿದರು. ಅಷ್ಟರಲ್ಲಿ ಪಠಾಣನ ಒಬ್ಬ ಸ್ನೇಹಿತನು ಟಿಕೀಟು ತರುವದಕ್ಕೆ ತೆರಳಿದನು. ಈ ಗೋವಿಂದಾಚಾರಿಯು ಅದೇ ಕಾಲದಲ್ಲಿ ಪುಣ್ಯೇಶನಗರಕ್ಕೆ ಹೊರಡುವ ಗಾಡಿಯನ್ನು ಹತ್ತಬೇಕಾಗಿತ್ತು. ಆ ವಿಷಯದಲ್ಲಿ ಆತನು ಪ್ರಯತ್ನವನ್ನೇನೂ ಮಾಡಲಿಲ್ಲ ಸೀತಾಂಬೆಯು ಎರಡು ಮೂರು ಸಾರೆ ತಿರುಗಾಡಿದವಳಾದ್ದರಿಂದ "ಇದೇನು ಚಿಕ್ಕಪ್ಪನವರೇ, ಆ ಗಾಡಿ ಹೊರಡುವ ಹೊತ್ತಾಯಿತಲ್ಲ!! ಯಾಕೆ ಆಲಸ್ಯ ಮಾಡುವದು?" ಎಂದು ಕೇಳಿದಳು. ಅದಕ್ಕೆ ಚಿಕ್ಕಪ್ಪನು:—"ಅವ್ವಾ, ಈ ಸಾಹೇಬರು ನನ್ನ ಸ್ನೇಹಿತರು; ಮತ್ತು ನಿನ್ನ ಗಂಡನಿಗೂ ಬೇಕಾದವರು. ನೀನು ನಿನ್ನ ಗಂಡನ ಮನೆಗೆ ಪ್ರಯಾಣ ಮಾಡುತ್ತೀ," ಎಂಬದು ಅಕಸ್ಮಾತ್ ಇವರಿಗೆ ಗೊತ್ತಾಯಿತು. "ಹೇಗಾದರೂ ಸರಿ ನೀವೂ ನಮ್ಮ ಸ್ನೇಹಿತರು, ಊರಿಗೆ ಬಂದು ಒಂದು ದಿವಸವಿದ್ದು ಮನಸ್ಸು ಸಂತೋಷಪಡಿಸಿ ಹೋಗಬೇಕೆಂದು ಜುಲುಮೆ ಮಾಡುತ್ತಾರೆ. ಏನು ಮಾಡಬೇಕು? ಈ ದಿವಸ ಇಲ್ಲಿಯೇ ಇದ್ದು ನಾಳೆ ಬೆಳಗ್ಗೆ ಗಾಡಿಯಲ್ಲಿ ಹೊರಟು ಪುಣ್ಯೇಶನಗರಕ್ಕೆ ಹೋಗೋಣ" ಎಂಬನು. ಅಷ್ಟರಲ್ಲಿ ಸೂರ್ಯೋದಯವಾಯಿತು. ಪುಣ್ಯೇಶನಗರಕ್ಕೆ ಹೋಗುವ ಗಾಡಿಯೂ ಹೊರಟು ಹೋಯಿತು. ಆಗ ಸೀತಾಂಬೆಯು:—ಇದೇನು, ನಮ್ಮ ಚಿಕ್ಕಪ್ಪನು ಹೀಗೆ

ಹೇಳುವನಲ್ಲ? ಹಿಂದಕ್ಕೆ ಹೋಗಬೇಕಂತೆ! ಎಂದು ಮನಸ್ಸಿನಲ್ಲಿ ಯೋಚಿಸುತ್ತಿದ್ದಳು.

ಸೀತಾಂಬೆಯು ಹೀಗೆ ಯೋಚಿಸುತ್ತ ಹಿಂತಿರುಗಿ ನೋಡಲು, ಗುಲಾಂಖಾನನು ಇನ್ನೊಬ್ಬನೊಡನೆ ಏನೇನೋ ಮಾತಾಡುತ್ತಿದ್ದನು. ಸೀತಾಂಬೆಗೆ ಅದರ ಅರ್ಥವು ಚನ್ನಾಗಿ ತಿಳಿಯದು. ಆಕೆಗೆ ಮನಸ್ಸಿನಲ್ಲೇನೋ ತುಂಬಾ ವ್ಯಥೆ. “ಅಯ್ಯೋ ದೇವರೆ, ನಮ್ಮನ್ನು ಸುರಕ್ಷಿತವಾಗಿ ಊರಿಗೆ ಹೇಗೆ ಸೇರಿಸುವೆ!!!” ಎಂದು ಆಕೆಯು ಕಳವಳಪಡುತ್ತ, ಅಳಲಾರಂಭಿಸಿದ ಮಗುವನ್ನು ಸಮಾಧಾನ ಮಾಡುತ್ತಿದ್ದಳು. ಅಷ್ಟರಲ್ಲೇ ಇನ್ನೊಬ್ಬನು ಟಿಕೀಟುಗಳನ್ನು ತೆಗೆದುಕೊಂಡು ಬಂದನು. ಮೊದಲಿನಂತೆ ಅವರೆಲ್ಲರು ಎರಡನೆಯ ತರಗತಿಯ ಗಾಡಿಯಲ್ಲಿ ಕುಳಿತರು. ಗಾಡಿಯೂ ಹೊರಟಿತು. ದ್ರವ್ಯವು ದೊರೆಯಿತೆಂದು ಆಚಾರಿಗೆ ಬಹು ಸಂತೋಷವಾಯಿತು ಗುಲಾಂಖಾನನಿಗಂತೂ, ಇಂಥಾ ಸ್ತ್ರೀ ರತ್ನವು ದೊರೆಯಿತೆಂದು ಪರಮಾನಂದವಾಯಿತು.

ಗಾಡಿಯಲ್ಲಿ ಕುಳಿತಾಗ ಸೀತಾಂಬೆಗೆ ಬಹಳ ವ್ಯಥೆಯುಂಟಾಗಲಾರಂಭಿಸಿತು. ಆಕೆಯು ಚಿಕ್ಕಪ್ಪನ ಕೆಟ್ಟ ನಡತೆಯನ್ನು ಒಮ್ಮೆ ಯೋಚಿಸುವಳು. ಆಗ್ಗೆ ಪ್ರಾಣ ಹೋಗುವಂತಾಗುವದು. “ಎಷ್ಟೇ ಆಗಲಿ, ಈ ತಂದೆಯು ನನಗೆ ಹ್ಯಾಗೆ ಕೇಡು ಮಾಡ್ಯಾನು?” ಎಂದು ಮತ್ತೊಮ್ಮೆ ಸಮಾಧಾನ ಮಾಡಿಕೊಳ್ಳುವಳು ಇಷ್ಟರಲ್ಲೇ ಅವರು ಇಳಿಯುವ ಸ್ಥಳವೂ ಯಮಪುರಿಯಂತೆ ಬಂದೊದಗಿತು. ಗಾಡಿಯು ನಿಂತಕೂಡಲೆ ಎಲ್ಲರೂ ಇಳಿದರು. ಗುಲಾಂಖಾನನು ಒಂದು ಕುದುರೆಯ ಗಾಡಿಯನ್ನು ಬಾಡಿಗೆಗೆ ಗೊತ್ತು ಮಾಡಿದನು. ಅಷ್ಟು ಹೊತ್ತಿಗೆ ಬೆಳಗಿನ ಹತ್ತು ಗಂಟೆ ಹೊಡೆದಿತ್ತು. ಕೂಸು ರಾತ್ರಿಯಿಂದ ಗಾಡಿಯಲ್ಲಿ ಬಹು ಬಳಲಿತ್ತಾದ್ದರಿಂದ ಅಳಲಾರಂಭಿಸಿತು. ಸೀತಾಂಬೆಯು ಎಂದೂ ಕೂಸನ್ನು ಕೈಮುಟ್ಟಿ ಆಡಿಸಿದವಳಲ್ಲ; ಅದರಲ್ಲೂ ಆಕೆಗೆ

ಹಿಂದಕ್ಕೆ ಬಂದೆವಲ್ಲಾ ಎಂಬ ಮನೋವ್ಯಥೆ ಬೇರೆ. ಇದೆಲ್ಲವನ್ನೂ ಒಂದು ಪಕ್ಕದಲ್ಲಿಟ್ಟು ಆಕೆಯು ಮಗುವನ್ನು ಸಂತೈಸಿದಳು. ತಾಯಿಂದಿರಿಗೆ ಎಷ್ಟು ಕಷ್ಟಗಳು ಬಂದಿದ್ದರೂ, ಮಕ್ಕಳನ್ನು ಅವರಲ್ಲದೆ ಯಾರು ಸಮಾಧಾನ ಮಾಡಬೇಕು? ಅಷ್ಟರಲ್ಲೇ ಹೊರಗೆ ನಿಂತಿದ್ದ ಗಾಡಿಯಲ್ಲಿ ಸೀತಾಂಬೆಯು ಚಿಕ್ಕಪ್ಪನೊಡನೆ ಕುಳಿತುಕೊಂಡಳು. ಊರಲ್ಲಿಯ ಮರ ಬಳ್ಳಿಗಳನ್ನು ನೋಡಿ ಮಗ ವು ನಗಲಾರಂಭಿಸಿತು. ಸೀತಾಂಬೆಗೆ ಅದನ್ನು ನೋಡಿ ಅಷ್ಟರಲ್ಲಿ ಸಂತೋಷವಾಯಿತು. ಅಯ್ಯೋ!!! ಈ ಪ್ರಾಣಿಯನ್ನು ದೇವರೇ ಕಾಪಾಡಬೇಕಲ್ಲವೆ? ಗುಲಾಂಖಾನನು ತಮ್ಮಿಬ್ಬರು ಸ್ನೇಹಿತರೊಡನೆ ಬೇರೆ ಗಾಡಿಯಲ್ಲಿ ಕುಳಿತು ಸೀತಾಂಬೆಯ ಗಾಡಿಯ ಹಿಂದೆ ಹೊರಟನು. ಕ್ರಮೇಣ ಅವರ ಬಂಗಲೆಗೆ ಗಾಡಿಯು ಬಂದು ನಿಂತಿತು ಗುಲಾಂಖಾನನು ಕೆಳಗಿಳಿದು ಇವರನ್ನೆಲ್ಲಾ ಇಳಿಯುವಂತೆ ಹೇಳಿದನು ಆತನು ಎಲ್ಲರೊಡನೆ ಒಳಗೆ ಪ್ರವೇಶಿಸಿದನು. ಗೋವಿಂದಾಚಾರಿಯು ನಗೆಮುಖವುಳ್ಳವನಾಗಿ ಹರಟುತ್ತ ನಡೆದನು. ಸೀತಾಂಬೆಯು ಮಗುವನ್ನೆತ್ತಿಕೊಂಡು, ಅಂಧಂತಮಸ್ಸೆಂಬ ನರಕವನ್ನು ಪ್ರವೇಶಿಸುವವಳಂತೆ ಬಹು ದುಃಖದಿಂದ ಚಿಕ್ಕಪ್ಪನ ಹಿಂದೆಯೇ ತೆರಳಿದಳು.

ಅಷ್ಟರಲ್ಲಿ ಇವರಿಳಿಯುವದಕ್ಕೆ ಬೇರೆ ಒಂದು ಕೋಣೆಯನ್ನುಸಿದ್ಧ ಮಾಡಿದ್ದರು. ಅಲ್ಲಿ ಆಳುಗಳು ಸಾಮಾನು ತಂದಿಟ್ಟರು ಗೋವಿಂದಾಚಾರಿಯು ಅಲ್ಲಿಗೆ ಬಂದು, ಮಗಳನ್ನು ನೋಡಿ:—'ಅಮ್ಮಾ, ಇಲ್ಲಿ ಅಡಿಗೆ ಮಾಡಲಿಕ್ಕೆ ಪ್ರಶಸ್ಥವಾಗಿರುವದು, ನಾನು ಸ್ವಲ್ಪ ಮಾತನಾಡಿಕೊಂಡು ಈಗಲೇ ಬರುವೆನು; ಅದುವರೆಗೂ ನೀನು ಇಲ್ಲಿಯೇ ಇರು. ಯಾರಾದರೂ ಅಡಿಗೆಯ ಸಾಮಾನು ತಂದರೆ, ಇಲ್ಲೇ ಇಡುವಂತೆ ಹೇಳು. ಇಕೋ ಮಗುವಿಗೆ ಹಾಲು ಕುಡಿಸು' ಎಂದು ಒಂದು ಬಟ್ಟಲದಲ್ಲಿ ಹಾಲನ್ನು ಇಟ್ಟು ತೆರಳಿದನು. ಸೀತಾಂಬೆಯು ಆ ಹಾಲನ್ನೂ ಸಂಗಡ ತಂದಿದ್ದ ಸ್ವಲ್ಪ ಬಿಸ್ಕುಟನ್ನೂ ಕೊಟ್ಟು ಮಗುವನ್ನು ಸಮಾಧಾನಪಡಿಸಿದಳು.

ಇತ್ತ ಆಚಾರಿಯು ಸಾವುಕಾರನ ಮನೆಗೆ ಹೋಗಿ, "ಇಗೋ ನನ್ನ ಮಾತಿನಂತೆ ಯುವತಿಯನ್ನು ನಿನ್ನಲ್ಲಿ ಬಿಟ್ಟಿರುವೆನು. ಮಿಕ್ಕ ವರಹ ಗಳೆಲ್ಲಿ? ಎಂದನು. ಗುಲಾಂಖಾನನು ಬಹು ಸಂತೋಷದಿಂದ ಮಿಕ್ಕ ದ್ರವ್ಯವನ್ನು ಕೊಟ್ಟನು. ಆಚಾರಿಯು ಸಲಾಮು ಮಾಡಿ ಹೊರಟನು. ಗುಲಾಂಖಾನನು ಊಟಮಾಡಿಕೊಂಡು ಹೋಗಿರೆಂದು ಆಚಾರ್ಯರಿಗೆ ಹೇಳಿದನು; ಆದರೆ ಆಚಾರಿಯು ಅದನ್ನು ಕೇಳಲೇ ಇಲ್ಲ ಆತನು ಹೋಗುವಾಗಲಾದರೂ ಮಗಳ ಮುಖವನ್ನು ನೋಡಲೇ ಇಲ್ಲ. ನೋಡಿ ದಿರಾ! ಅವನ ಕಟುಕತನವನ್ನು! ಅದೇ ಹೊತ್ತಿಗೆ ಸರಿಯಾಗಿ ಮಾಹಿ ಷ್ಮತೀನಗರಕ್ಕೆ ಹೋಗುವ ಸಾಮಾನಿನ ಗಾಡಿಯೊಂದು ಅಲ್ಲಿಂದ ಹೊರ ಡುವದಾಗಿತ್ತು. ಇದನ್ನು ಆಚಾರಿಯು ಕೇಳಿ:—ನಾನು ಮಾಡಿದ ಯೋಚನೆಯು ಕೈಗೂಡಿತಲ್ಲವೆ? ಈ ಗಾಡಿಯಲ್ಲಿ ಕುಳಿತು ದಾರಿಯಲ್ಲೇ ಈ ರೀತಿ ಅಳಿಯನಿಗೆ ಕಾಗದ ಬರೆದು ಸಿದ್ಧಮಾಡಿಕೊಂಡಿದ್ದು, ಮುಂದಿನ ಸ್ಟೇಶನ್ನಿನಲ್ಲಿ ಇಳಿದು ಸ್ವಲ್ಪ ಹೊತ್ತು ನಿಂತರೆ, ಪುಣ್ಯನಗರದ ಕಡೆಗೆ ಹೋಗುವ ಮೇಲ್‌ಗಾಡಿಯು ಬರುತ್ತದೆ ಅದರಲ್ಲಿ ಈ ಕಾಗದವನ್ನು ಹಾಕಿಬಿಟ್ಟರೆ, ಅಳಿಯನು ನನ್ನನ್ನು ಮಾತಾಡಿಸುವಂತಿಲ್ಲ. ದೇವರು ಒಳ್ಳೇ ಸಮಯ ದೊರಕಿಸಿದನು. ಇನ್ನು ಸ್ವಲ್ಪ ಹೊತ್ತಾಗಿದ್ದರೆ ನಾನು ಮಾಡಿದ ಕೆಲಸವೆಲ್ಲ ಕೆಟ್ಟು ಹೋಗುತ್ತಿತ್ತು, ಎಂದು ಮನಸ್ಸಿನಲ್ಲಿ ಯೋ ಚನೆ ಮಾಡುತ್ತ ವೇಗವಾಗಿ ಬಂದು ಟಿಕಿಟು ತೆಗೆದುಕೊಂಡು ಗಾಡಿ ಹತ್ತಿದನು. ಆತನು ಕ್ರಮೇಣ ಉದ್ದೇಶಿಸಿದ ಸ್ಟೇಶನ್ನಿನಲ್ಲಿಳಿದು, ತನ್ನ ಕೆಲಸವನ್ನೆಲ್ಲ ಮುಗಿಸಿಕೊಂಡು ಅದೇ ಊರಲ್ಲೇ ಆ ದಿವಸ ಮುಕ್ಕಾಂ ಮಾಡಿದನು. "ಕೊಳು ಹೆಚ್ಚಿದರೆ, ಕುಲಾಚಾರ ಹೆಚ್ಚಿತಂತೆ" ಎಂಬ ಗಾದೆಗೆ ಸರಿಯಾಗಿ ಈ ಆಚಾರಿಗೆ ಕೈಯಲ್ಲಿ ಹಣ ಬಂದೊಡನೆ ಪಾಣಿಗ್ರಹ ಣದ, ಸೆರಗುಡಿಯುವ ಅಭಿಲಾಷೆ ಹುಟ್ಟಿತು.

ಇತ್ತ ಗುಲಾಂಖಾನನ ಮನೆಯಲ್ಲಿರುವ ಸೀತಾಂಬೆಯು ಮಧ್ಯಾ

ಹ್ನದ ಎರಡು ಘಂಟೆಯ ವರೆಗೆ ಹಾದಿಯನ್ನು ನೋಡಿದರೂ ಚಿಕ್ಕಪ್ಪನ ವರು ಬರಲೇ ಇಲ್ಲ. ಎರಡು ಮೂರು ಸಲ ಪಠಾಣರ ಸಿಪಾಯಿಗಳು ಬಂದು ಆಕೆಯನ್ನು ನೋಡಿಕೊಂಡು ಹೋದರು. ಇದನ್ನೆಲ್ಲ ಯೋಚಿಸಿ ಸೀತಾಂಬೆಯು "ಚಿಕ್ಕಪ್ಪನು ಏನೋ ಘಾತುಕತನ ಮಾಡಿದನೆ"ೆಂದು ನಿರ್ಧರಿಸಿದಳು. ಗಾಬರಿಯು ಮನಸ್ಸಿಗೆ ಕವಚ ಹಾಕಿದಂತೆ ಆಕೆಯನ್ನು ಮುಚ್ಚಿಕೊಂಡಿತು. ಆಕೆಗೆ ಬೇರೆ ಜನರ ಮೋರೆ ನೋಡೇನೆಂದರೆ ಸಹ ದೂರೆಯದಾಯಿತು. ಸುತ್ತಲೂ ಬರೇ ಬೈಲು; ಬೇರೆ ಮನೆಗಳೇ ಇಲ್ಲ ಸೀತಾಂಬೆಯು ಹ್ಯಾಗಾದರೂ ಧೈರ್ಯಮಾಡಿ ಹೊರಗೆ ಬೊಗ್ಗಿ ನೋಡಿದಳು. ಅಲ್ಲಿ ಪಠಾಣರ ಸಿಪಾಯಿಯು ಕಾದಿದ್ದನು. ಅವನನ್ನು ನೋಡಿದೊಡನೆ ಸೀತಾಂಬೆಯ ಎದೆಯೊಡೆಯಿತು, ಕಣ್ಣೀರು ಸುರಿಯಹತ್ತಿದವು, ತುಟಿಯೊಣಗಿತು. ಅಯ್ಯೋ!! ಪಾಪ! ಆ ವ್ಯಥೆಯು ಪರಮೇಶ್ವರನಿಗೇ ಗೊತ್ತು. ಆ ತರುಣೀಮಣಿಯು:—"ಹಾ! ಏನು ಮಾಡಲಿ? ಹೊರಗೆ ಹೋಗೋಣವೆಂದರೆ ಬಾಗಿಲಲ್ಲಿ ಸಿಪಾಯಿಯು ಕಾದಿರುವನಲ್ಲಾ!! ಅಯ್ಯೋ ನನ್ನ ಪಾತಿವ್ರತ್ಯಕ್ಕೆ ಭಂಗಬಂತೇ! ಹಾ! ಭಗವಂತನೇ!! ನಿನಗೆ ಸ್ವಲ್ಪಾದರೂ ಕರುಣವಿಲ್ಲವೇ!!! ನಾನು ಇದು ವರೆಗೂ ಪರಪುರುಷರ ಮುಖವನ್ನೂ ನೋಡಿದವಳಲ್ಲವಲ್ಲ!! ಇದಕ್ಕಿಂತಲೂ ನನ್ನ ಜೀವವನ್ನಾದರೂ ಒಯ್ಯಬಾರದೆ?" ಎಂದು ಅಳುವಷ್ಟರಲ್ಲಿಯೇ ಮಗುವು ಹಂಬಲಿಸಿತು ಅದನ್ನು ನೋಡಿ ಸೀತಾಂಬೆಯು:—ಅಯ್ಯೋ!! ಈ ಪಾಪಿಯ ಹೊಟ್ಟೆಯಲ್ಲಿ ನೀನ್ಯಾಕೆ ಹುಟ್ಟಿದೆಯಪ್ಪಾ!! ತಾಯಿಯ ಸುಖವನ್ನು ಏನು ಕಂಡೆ? ಅಹಹ!!! ನನ್ನ ಪತಿಯು ನಿನ್ನ ಮುಖವನ್ನಾದರೂ ನೋಡಲಿಲ್ಲವಲ್ಲಾ!! ಇದೇನು ವಿಪತ್ತು! ಪ್ರಳಯ ಕಾಲವೇ ಅಲ್ಲವೆ? ಸಾಕು-ಸಾಕು, ಇನ್ನು ಭೂಮಿಯ ಮೇಲೆ ಇರಲಾರೆನು, ಎಂದು ಹಂಬಲಿಸುತ್ತಿದ್ದಳು.

ಅಷ್ಟರಲ್ಲಿ ಗುಲಾಂಖಾನನು ಒಳ್ಳೇ ಉಡುಪುಗಳನ್ನು ಧರಿಸಿ, ತಾಂ

ಬೀಗವನ್ನು ಸವಿದು, ಸೀತಾಂಬೆಯು ಕುಳಿತಿದ್ದ ಮನೆಯನ್ನು ಮೆಲ್ಲಗೆ ಹೊಕ್ಕನು. ಈ ಮಹಾರಾಯನನ್ನು ನೋಡಿದ ಮೇಲಂತೂ ಸಾಯು ವವರಿಗೆ ಯಮನ ದರ್ಶನವಾದಂತೆಯೂ, ಆನೆಗಳಿಗೆ ಸಿಂಹದ ದರ್ಶನ ವಾದಂತೆಯೂ, ಗೋವುಗಳಿಗೆ ಹುಲಿಯ ದರ್ಶನವಾದಂತೆಯೂ ಸೀತಾಂ ಬೆಗೆ ಆಯಿತು. ಹೇಳಲೇನು? ಸೀತಾಂಬೆಯು ಗುಲಾಂಖಾನನನ್ನು ನೋಡಿ ವಿಸ್ಮಿತಳಾದಳು. ಮುಖ ಬೆವರಿತು ಶರೀರವು ನಡುಗಲಾರಂ ಭಿಸಿತು. ಕಷ್ಟಗಳ್ಲೋ ಭಯ ದಿಂದ ಆಕೆಯು ಒಡವೆಗಳನ್ನು ತೆಗೆದಿಟ್ಟಿ ದ್ದಳು ಇಂಥ ಶರಣಾಗತಳನ್ನು ನೋಡಿ:—ಊಟವಾಯಿತೋ? ಎಂದು ಗುಲಾಂಖಾನನು ಕೇಳಿದನು ಸೀತಾಂಬೆಯು ಇಷ್ಟು ಹೆದರಿ ದ್ದರೂ ಬುದ್ಧಿವಂತೆಯಾದ್ದರಿಂದ ಹೆದರಿಕೆಯನ್ನು ಅಷ್ಟು ಹೊರಪಡಿಸದೆ, ಅಂಜುತ್ತಂಜುತ್ತ:—ನಮ್ಮ ಚಿಕ್ಕಪ್ಪನು ಬಂದನಂತರ ಊಟಮಾಡಬೇ ಕೆಂದಳು ಅದಕ್ಕಾ ಗುಲಾಂಖಾನನು ನಕ್ಕು:—"ನಿಮದೂಗೆ ಅಪ್ಪ, ನಮದೂಗೆ ಮುನ್ನೂರು ವರಹಂ ತಗೊಂಡು ನಿಮ್ಮದೂಗೆ ಕೊಟ್ಟು ಬಿಟ್ಟಿದ್ದಾನೆ" ಎಂದನು. ಇದನ್ನು ಕೇಳಿ ಸೀತಾಂಬೆಗೆ ನಿಸ್ಸಂದೇಹ ವಾಯಿತು ನೋಡಿದಿರಾ! ಎಂಥ ಕಷ್ಟಕಾಲ! ಅದನ್ನೂ ಸಹಿಸಿಕೊಂಡು ಸೀತಾಂಬೆಯು:—ನನಗೇನು? ಇಲ್ಲಿಯೇ ಇರುವೆನೆಂದಳು. ಗುಲಾಂ ಖಾನನು:—"ಹಂಗಾದರೆ, ನಿಮ್ಮದೂಗೆ ನಮ್ಮ ಘರೇ, ಊಟ ಮಾಡು ತ್ತೀಯಾ?" ಎಂದು ಕೇಳಲಾರಂಭಿಸಿದನು ಸೀತಾಂಬೆಯು ಎದೆ ಕಲ್ಲು ಮಾಡಿಕೊಂಡು:—"ಅದಕ್ಕೇನೂ ಅಡ್ಡಿಯಿಲ್ಲ; ಆದರೆ ಈಗ ನನಗೆ ಸ್ವಲ್ಪ ಹೊಟ್ಟೆ ನೋಯುತ್ತದೆ ಅದಕ್ಕೋಸುಗ ಈಗ ಊಟ ಮಾಡಲಾರೆ. ಸ್ವಲ್ಪ ಹಾಲು ಒಂದು ಸಾಣೇಕಲ್ಲು ತರಿಸಿಕೊಟ್ಟರೆ, ನನ್ನಲ್ಲೊಂದು ಮಾತ್ರೆಯಿದೆ ಅದನ್ನು ತೆಗೆದುಕೊಳ್ಳುವೆನೆ"ಂದಳು. ಸಾವುಕಾರನು ಅದರಂತೆ ಸಾಮಾನು ತಂದಿಡುವದಕ್ಕೆ ಮತ್ತೊಬ್ಬ ಸಿಪಾಯಿಗೆ ಹೇಳಿ, ತಾನೂ ಬೇರೆ ಔಷಧಗಳನ್ನು ತರುವದಕ್ಕೆ ಪೇಟೆಗೆ ಹೋದನು. ಜಾಗ್ರತೆ

ಯಾಗಿ ಜವಾನನು ಹಾಲನ್ನೂ, ಸಾಣೆಕಲ್ಲನ್ನೂ ತಂದಿಟ್ಟನು.

ಸೀತಾಂಬೆಯು ದುಃಖವನ್ನು ಹೇಳಲು ಅಸಾಧ್ಯವು ಆಕೆಯು:- "ಅಯ್ಯೋ ಜಗನ್ನಾಥನೇ, ನಿನಗೇಕೆ ಕರುಣೆಬಾರದು? ಈ ಭಾಗ್ಯಕ್ಕೆ ನನ್ನನ್ನೇಕೆ ಸೃಷ್ಟಿಮಾಡಿದೆ? ಅಂಥಾ ಕಷ್ಟಕಾಲದಲ್ಲಿ ದ್ರೌಪದಿಗೆ ಅಕ್ಷಯ್ಯ ವಸ್ತ್ರಗಳನ್ನು ಕೊಟ್ಟು ನೀನು ಕಾಯಲಿಲ್ಲವೆ? ಲೋಕದಲ್ಲಿ ಸ್ತ್ರೀಯರಿಗೆ ಪಾತಿವ್ರತ್ಯವು ದೊಡ್ಡದೆಂದು ನೀನೇ ಅಲ್ಲವೇ ಉಪದೇಶ ಕೊಟ್ಟವನು? ಇದೇನು ನನ್ನ ಪಾತಿವ್ರತ್ಯವು ಕಾಡುಪಾಲಾಗುತ್ತಿರಲು, ನೋಡುತ್ತಿರುವೆಯಾ! ಭಗವಂತನೆ, ಸಂರಕ್ಷಿಸು, ಸಂರಕ್ಷಿಸು ದೇವರೆಂದು ಭಾವಿಸಿದ್ದ ನನ್ನ ಗಂಡನಿಗೆ ಮೋಸಮಾಡಿ ಈಗಲೇ ಮರಣಹೊಂದಬೇಕೆಂದಿರುವೆನಲ್ಲ! ನನ್ನೀ ವರ್ತಮಾನವು ಪತಿಗೆ ತಿಳಿದರೆ, ಖಂಡಿತವಾಗಿ ಅತನು ಪ್ರಾಣಧಾರಣ ಮಾಡಲಾರನು. ನನಹ್ಯಕ್ಕೆ ನಾನು ಪ್ರಾಣಬಿಡೋಣವೆಂದರೆ, ಇದೊಂದು ಪತಿಹತ್ಯದೋಷ ಬರುವದಲ್ಲ!!!(ಹಾಗೆಯೇ ಮಗುವನ್ನು ನೋಡಿ!!)ಅಯ್ಯೋ, ನಾನಿಲ್ಲಿ ಮೃತಳಾದರೆ, ನಿನ್ನ ಪಾಲಕರು ಯಾರು? ನಿನ್ನ ತಂದೆಯಾದರು ಹತ್ತಿರವಿಲ್ಲವಲ್ಲ! ಇನ್ನು ಮುಂದೆ ಯಾರನ್ನು ಮುದ್ದುಭಾಷೆಗಳಿಂದ "ಅಮ್ಮಾ, ಅಮ್ಮಾ" ಎಂದು ಕರೆಯುವೆ! ಹಾ ಹಾ!! ಏನು ಪ್ರಳಯ ಕಾಲಬಂತು? ಯೋಚನೆ ಮಾಡಿ:— "ಉಪಯೋಗವಿಲ್ಲ. ಮಾನ ಹೋದಮೇಲೆ ಇದ್ದರೇನು? ಓ ಭಗವಂತನೇ, ಅನಾಥರಕ್ಷಕನೇ, ಈ ಮಗು ನನ್ನದಲ್ಲ, ನಿನ್ನದು. ನೀನೇ ಸಲಹತಕ್ಕದ್ದೆಂದು, ಮಗುವನ್ನು ಮುದ್ದಿಟ್ಟುಕೊಂಡು ಅಳಲಾರಂಭಿಸಿದಳು.

ಅಷ್ಟರಲ್ಲಿಯೇ ಆ ಅನಾಥೆಯು ಎಚ್ಚತ್ತು ಇನ್ನು ತಡಮಾಡಿದರೆ ಉಪಯೋಗವಿಲ್ಲೆಂದು ತಿಳಿದು, ಹಾಲನ್ನೂ, ಸಾಣೆಕಲ್ಲನ್ನೂ ಮುಂದಿಟ್ಟುಕೊಂಡು ಕುಳಿತಳು ಕಿವಿಯಲ್ಲಿದ್ದ ವಜ್ರದ ಓಲೆಯನ್ನು ತೆಗೆದು ಸಾಣೆಯಕಲ್ಲಿನ ಮೇಲೆ ಸ್ವಲ್ಪ ಹಾಲು ಹಾಕಿ, ಅದರಲ್ಲಿ ವಜ್ರವನ್ನು ಅರೆಯಲಾರಂಭಿಸಿದಳು. ಅನಂತರ ಅದನ್ನು ತಾಲಿಗೆ ತುಂಬಿ ಕಲ

ಕಿಟ್ಟಳು. ಅಷ್ಟರಲ್ಲಿ ಪತಿಯನ್ನು ಮತ್ತೊಮ್ಮೆ ಸ್ಮರಿಸಿ:—ಅಯ್ಯೋ!!! ಅಂಥಾ ಪತಿಯನ್ನು ಬಿಟ್ಟು ಪ್ರಾಣಗಳನ್ನು ಕಳೆದುಕೊಳ್ಳಬೇಕೆ? ಆ ಜನಕಪುತ್ರಿಯಾದ ಸೀತೆಗೆ ಇಂಥಾ ಕಷ್ಟವೇ ಬಂದಿರಲಿಲ್ಲವೇ? ಆಗ್ಗೆ ಮಹತ್ ಪ್ರಯತ್ನಗಳಿಂದ ವಿಪತ್ತು ದೂರವಾಗಿ ಆ ದಂಪತಿಗಳನೇಕ ವರ್ಷಗಳವರೆಗೆ ಸುಖವಾಗಿ ರಾಜ್ಯಭಾರ ಮಾಡಿದರು. ಹಾಗೆಯೇ ದೇವರು ನನಗೂ ಸಹಾಯ ಮಾಡಿಯಾನಲ್ಲವೆ!! ಇರಲಿ, ನಾನು ಮಾಡುವ ಪ್ರಯತ್ನ ಮಾಡುವೆನು. ಈಗ ವಿಷ ಕುಡಿಯುವದು ಸರಿಯಲ್ಲ. ಆತ್ಮ ಘಾತವು ಮಹಾ ಪಾಪವು, ಎಂದು ವಿಷವನ್ನು ಹಾಗೇ ತೆಗೆದಿಟ್ಟು, “ಬಹು ಹೊಟ್ಟೆಶೂಲೆ,” ಎಂದು ಒದರುತ್ತಾ ಮನೆಯಲ್ಲಾ ಹೊರಳಾಡ ಲಾರಂಭಿಸಿದಳು.

---

೪ನೆಯ ಪ್ರಕರಣ.

## ಮನೋರಾಜ್ಯಭಂಗ.



ಇತ್ತ ಗುಲಾಂಖಾನನು ಪೇಟಿಯಿಂದ ಔಷಧಿಯನ್ನು ತಂದು ತೆಗೆ ದುಕೊಳ್ಳುವಂತೆ ಹೇಳುವನು; ಅದರಂತೆ ಸೀತಾಂಬೆಯೂ ನಟಿಸುವಳು; ಅನಂತರ ಹೊಟ್ಟೆಶೂಲೆಯು ಮತ್ತಷ್ಟು ಹೆಚ್ಚಾಯಿತೆನ್ನುವಳು. ಸಾವು ಕಾರನು ಮತ್ತೂ ಪೇಟೆಗೆ ತಾನೇ ಓಡುವನು ಹೀಗಾಗಿ ಆ ಸಾವು ಕಾರನು ‘ಗುಲಾಂ’ ಎಂಬ ಹೆಸರನ್ನು ಈ ರಮಣಿಗೆ ಗುಲಾಮನಾಗಿ ಅನ್ವರ್ಥ ಮಾಡಿಕೊಂಡನು. ಅಷ್ಟರಲ್ಲಿ ಮಗು ಎದ್ದು ಸ್ವಲ್ಪ ಹೊತ್ತು ತನ್ನಷ್ಟಕ್ಕೆ ತಾನೇ ಆಡಲಾರಂಭಿಸಿತು ಸೀತಾಂಬೆಯು ಹಾಗೆಯೇ ಮಗುವಿಗೆ ಸ್ವಲ್ಪ ಸ್ತನ್ಯಕೊಟ್ಟು, ಪತ್ತೆ ಮಲಗಿಸಿದಳು. ಅಷ್ಟರಲ್ಲೇ ಸೂರ್ಯನು ಈ ತರುಣೀಮಣಿಯ ತಾಪವನ್ನು ನೋಡಲಾರದೆ, ಇವಳ

ಮನೋರಥವು ಕೈಗೂಡಲೆಂದು ಆಶೀರ್ವದಿಸಿ ತೆರಳಿದನೋ ಎಂಬಂತೆ, ಅಸ್ತಾಚಲವನ್ನು ಹೊಂದಿದನು.

ಗುಲಾಂಖಾನ, ಗೋವಿಂದಾಚಾರಿ ಇವರಿಬ್ಬರ ಹೃದಯದಲ್ಲಿದ್ದ ಅಂಧಕಾರವು ಕತ್ತಲೆಯ ರೂಪದಿಂದ ಜಗತ್ತನ್ನೆಲ್ಲ ವ್ಯಾಪಿಸಿತು ಆಗಲೂ ಸೀತಾಂಬೆಯು ಪೂರ್ವದಂತೆಯೇ ವೇದನೆಯನ್ನು ಅನುಭವಿಸುತ್ತಿದ್ದಳು. ದೀಪಗಳನ್ನು ಎಲ್ಲಾ ಕಡೆಯಲ್ಲಿಯೂ ಹಚ್ಚಿದರು. ಗುಲಾಂಖಾನನು ಬಂದು:—'ನಿಮ್ಮದೂಗೆ ಹೊಟ್ಟೆನೋವು ಹೇಗಿದೆ?' ಎಂದು ಕೇಳಿದನು. ಆಗ ರಾತ್ರಿ ೯ಗಂಟೆಗಳಾಗಿದ್ದವು. ಜನಗಳೆಲ್ಲ ಮಲಗುವ ಸಮಯ. ಆ ವೇಳೆಯಲ್ಲಿ:—"ನಾನು ಹೊರಕ್ಕೆ ಹೋಗಿ ಬರಬೇಕಾಗಿದೆ. ಯಾರ ನ್ನಾದರೂ ದಾಸಿಯರನ್ನು ಕಳುಹಿಸಿದರೆ ಹೋಗಿ ಬರುವೆನು'' ಎಂದಳು. ಗುಲಾಂಖಾನನು:— 'ಹೊರಗೆ ಬಹು ಕತ್ತಲು, ಈ ಹೊರಭಾಗದ ಖೋಲಿಯಲ್ಲಿ ನಡೆ' ಎಂದನು. ಅದಕ್ಕೆ ಸೀತಾಂಬೆಯು:--ಹಾಗೆ ಮಾಡು ವದು ನಮಗೆ ಅಸಹ್ಯ. ಸ್ವಲ್ಪ ದೂರ ಹೋಗಿ ನಮಗಭ್ಯಾಸ ಬಿದ್ದಿರು ವದು. ನಿಮ್ಮ ಇಬ್ಬರು ದಾಸಿಯರನ್ನು ಜೊತೆಗೆ ಕಳುಹಿಸಿರಿ, ಇದೇ ಬರುವೆನು, ಎಂದಳು. ಸಾವುಕಾರನು ಸ್ವಲ್ಪ ಮರುಳಾಗಿ "ಕತ್ತಲಲ್ಲಿ ಈಕೆಯು ಎಲ್ಲಿ ಹೋಗುವಳೆಂ''ದು ಉದಾಸೀನ ಮಾಡಿ, ಇಬ್ಬರು ದಾಸಿ ಯರನ್ನೂ, ಒಬ್ಬ ಜವಾನನನ್ನೂ ದೀಪ ಕೊಟ್ಟು ಕಳುಹಿದನು. ಸೀತಾಂ ಬೆಯು ಮಗುವಿನ ಆಶೆಯನಂತೂ ಬಿಟ್ಟೇ ಇದ್ದಳಷ್ಟೇ? ಒಡವೆಗಳ ವಿಷಯವಂತೂ ನೆನಪಿನಲ್ಲಿಯೇ ಇದ್ದಿಲ್ಲ ಮಬ್ಯ, ಮಾನವುಳಿಸಿ ಕೊಂಡು ಗಂಡನನ್ನು ಹೊಂದಿದರೆ, ಅದೇ ತನಗೆ ಸ್ವರ್ಗಸುಖವೆಂದು ಆಕೆಯು ತಿಳಿದಳು.

ಆ ಅನಾಥೆಯು ಕಣ್ಣೀರು ಹಾಕುತ್ತ ಮೆಲ್ಲನೆ ತೆರಳಿದಳು ಸ್ವಲ್ಪ ದೂರ ಹೋದ ಮೇಲೆ ಜವಾನನಿಗೆ ಇಲ್ಲಿಯೇ ನಿಲ್ಲೆಂದು ಹೇಳಿದಳು ಇನ್ನೂ ಮುಂದೆ ಕಂಪಾವುಂಡ ಗೋಡೆಯ ಹತ್ತಿರ ಗೋಡೆಗಳ ಪಾಳ

ಗಳಿದ್ದವು. ಅವುಗಳಿಗೆ ಹತ್ತು ಮಾರು ದೂರದಲ್ಲಿ ದಾಸಿಯರಿಗೆ:—ನೀವು ದೀಪ ಇಟ್ಟುಕೊಂಡು ಸ್ವಲ್ಪ ಹೊತ್ತು ಇಲ್ಲಿಯೇ ಕುಳಿತು ಕೊಳ್ಳಿರಿ. ನಾನು ಈಗ ಬರುವೆನು ಎಂದು ಮೆಲ್ಲಗೆ ಒಳಹೊಕ್ಕಳು. ಪಾಪ! ಸೀತಾಂಬೆಗೆ ಹೊಟ್ಟೆನೋವು ಎಲ್ಲಿಯದು? ಯೋಚನೆಯೆಂಬ ಹೊಟ್ಟೆನೋವೇ ಅವಳಲ್ಲಿ ತುಂಬಿತ್ತು! ಆಕೆಯು ಗೋಡೆಯ ಬಳಿಯಲ್ಲಿ ನಿಂತು ಆಚೆಯ ಭಾಗವನ್ನು ಬಗ್ಗಿ ನೋಡಿದಳು ಅಲ್ಲಿಂದ ಆಚೆಗೆ ಒಂದು ಸಣ್ಣ ರಸ್ತೆಯು ಕಾಣಿಸಿತು. ಗೋಡೆಯು ಒಂದು ಎದೆಮಟ್ಟ ಎತ್ತರ ಇತ್ತು. ಸೀತಾಂಬೆಯು ಅಬಲೆಯಾದರೂ ಆಗ ಸಬಲೆಯಾದಳು. ಇಲ್ಲಿಂದ ಆಚೆಗೆ ಹಾರಬೇಕೆಂದು ಆಕೆಯು ಯೋಚಿಸಿದಳು ಹ್ಯಾಗೆ ಹಾರಿದಳೊ ಏನೋ! ದೇವರೇಗತಿಯೆಂದು ಆಚೆಯ ಭಾಗದಲ್ಲಿ ಹಾರಿಬಿದ್ದಳು ಅಲ್ಲಿ ದೈವಯೋಗದಿಂದ ನೀರು ಹರಿಯುವ ಹಳ್ಳವು ಇತ್ತು ಅದರ ಬದಿಯೆಲ್ಲೆಲ್ಲ ಹುಲ್ಲು ದಟ್ಟವಾಗಿ ಬೆಳೆದಿತ್ತು. ಆದ್ದರಿಂದ ಸೀತಾಂಬೆಗೆ ಗಾದಿಯ ಮೇಲೆ ಬಿದ್ದಂತಾಯಿತು ಸ್ವಲ್ಪವೂ ಸಪ್ಪಳವಾಗಲಿಲ್ಲ; ಆದರೆ ಕೊನೆಯ ಕಲ್ಲು ತಗಲಿ ಆಕೆಯ ಮೊಣಕಾಲು ಸ್ವಲ್ಪ ತೆರೆದಿತ್ತು. ಆದರೂ ಆ ತರುಣೀಮಣಿಗೆ ಅದು ಲಕ್ಷ್ಯವೇ ಇಲ್ಲ. ಆಕೆಯು ಅಲ್ಲಿಂದ ಹಾಗೇ ಎದ್ದು ನನ್ನನ್ನು ಯಾರು ಕಾಪಾಡುವರೆಂದು ಯೋಚಿಸುತ್ತ ರಸ್ತೆಯಲ್ಲಿ ಓಡ ಲಾರಂಭಿಸಿದಳು. ಅಂಗಡಿಗಳೆಲ್ಲಾ ಬಾಗಿಲ ಮುಚ್ಚಿದ್ದವು ಈ ತರುಣಿಯು ದೈವಯೋಗದಿಂದ ಅಲ್ಲಿ ಒಬ್ಬ ವೈಶ್ಯನು ಅಂಗಡಿಯ ಎಲ್ಲ ಹಲಗೆಗಳನ್ನು ಹಾಕಿ ಕೊನೆಯ ಹಲಗೆಯನ್ನು ಹಾಕಲು ಸಿದ್ಧನಾಗಿದ್ದನು. ಸಾಯುವವರಿಗೆ ಅಮೃತವನ್ನು ತೋರಿಸಿದಂತೆ ಆಯಿತು. ಸೀತಾಂಬೆಯು ಆ ವೈಶ್ಯನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು:—ಮಹಾರಾಯಾ, ನನ್ನನ್ನು ಒಳಗೆ ಕರೆದುಕೋ, ಪ್ರಾಣದಾನ ಮಾಡು, ನೀನು ನಮ್ಮ ತಂದೆ, ಎಂದು ಗಟ್ಟಿಯಾಗಿ ಅಳಲಾರಂಭಿಸಿದಳು. ಆ ವೈಶ್ಯನಿಗೆ ಇದೇನು ಭೂತವೋ, ಪ್ರೇತವೋ, ಪಿಶಾಚಿಯೋ ಎಂದು ಸಂದೇಹ

ಬಂತು. ಆತನು:—ನೀನು ಯಾರೆಂದು ಸೀತಾಂಬೆಯನ್ನು ಕೇಳಿದನು. ಆದಕ್ಕೆ ಆ ತರುಣಿಯು:—ಅಪ್ಪಾ, ನನ್ನನ್ನು ಒಳಗೆ ಕರೆದುಕೊಂಡು ಹೋದರೆ ಎಲ್ಲಾ ಹೇಳುತ್ತೇನೆ. ನಾನು ಮನುಷ್ಯಳೇ ಎಂದು ಅಳಲಾರಂಭಿಸಿದಳು. ಈ ಲಲನೆಯನ್ನು ನೋಡಿ ವೈಶ್ಯನಿಗೂ ತುಂಬಾ ಕರುಣೆ ಹುಟ್ಟಿತು; ಆಕೆ ಹೇಳಿದಂತೆ ತರುಣಿಯನ್ನು ಒಳಗೆ ಕಳುಹಿಸಿ, ತಾನೂ ಒಳಹೊಕ್ಕು ಬಾಗಿಲು ಹಾಕಿಕೊಂಡನು.

ಆ ವೈಶ್ಯನ ಹೆಂಡತಿಯು ಒಳಗೆ ಬಂದ ತರುಣಿಯನ್ನು ನೋಡಿ:-ಇದೇನಮ್ಮ ಇಷ್ಟು ಗಾಬರಿ? ಎಂದು ಸಂತಯಿಸಿ:—"ಅಯ್ಯೋ!! ಮೊಣಕಾಲೆಲ್ಲಾ ರಕ್ತಬಂದಿದೆಯಲ್ಲ?" ಎಂದು ಪಶ್ಚಾತ್ತಾಪಪಟ್ಟು ಅದು ಸ್ವಲ್ಪ ವಿಲ್ಲುವಂತೆ ಉಪಚಾರ ಮಾಡಿದಳು. ಇಷ್ಟಾದರೂ ಸೀತಾಂಬೆಯ ಬಾಯಲ್ಲಿ ಮಾತೇ ಹೊರಡದಾದವು ಆಕೆಯು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು ದಂಪತಿಗಳಿಬ್ಬರೂ ಈ ತರುಣಿಯನ್ನು ಒಳಗೆ ಕರದುಕೊಂಡು ಹೋಗಿ "ನೀನು ಯಾರು? ನಿನ್ನ ಸ್ಥಳ ಯಾವದು? ಇಷ್ಟು ಹೊತ್ತಿನಲ್ಲಿ ಹೀಗೆ ಓಡಿಬರಲು ಕಾರಣವೇನಮ್ಮಾ" ಎಂದು ಕೇಳಿದರು. ಸೀತಾಂಬೆಯು ತನ್ನ ಹಿಂದಿನ ಸ್ಥಿತಿಯನ್ನೆಲ್ಲಾ ಹೇಳಿ, ತನ್ನ ತಂದೆಯ ದುಷ್ಟತನವನ್ನೂ, ಆತನು ಪಠಾಣನಿಗೆ ತನ್ನನ್ನು ಮಾರಿದ್ದನ್ನೂ ಮರೆಮಾಜದೆ ವಿಸ್ತಾರವಾಗಿ ಹೇಳಿದಳು; ಮತ್ತೂ ತನ್ನ ಮಾತಿನಲ್ಲಿ ಸಂಶಯವಿದ್ದರೆ ಆ ಪಠಾಣನ ಮನೆಗೆ ಈಗಲೇ ಹೋಗಿ ಬರ್ರಿ. ಎಲ್ಲ ವಿದಿತವಾಗುವದು, ಎಂದಳು. ವೈಶ್ಯವರನಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ಪ್ರತ್ಯಕ್ಷವಾದರೂ ಪ್ರಮಾಣಿಸಿ ನೋಡಬೇಕೆಂದು ಯೋಚಿಸಿ, ಆ ವೈಶ್ಯನು ತನ್ನ ಹೆಂಡತಿಗೆ:—ನಾನು ಆ ಪಠಾಣನ ಮನೆಯ ಬಳಿಯಲ್ಲಿರುವ ನಮ್ಮ ನೆಂಟರ ಮನೆಗೆ ಹೋಗಿ ಬರುವವನಂತೆ ಹೋಗಿ, ವಿಚಾರಿಸಿಕೊಂಡು ಬರುವೆನು ಈ ಯುವತಿಯನ್ನು ಸಮಾಧಾನ ಮಾಡಿ ಏನಾದರೂ ತಿನ್ನುವದಕ್ಕೆ ಕೊಡು, ಎಂದು ಹೇಳಿ ಹೊರಗೆ ಹೊರಟನು.

ಆತನ ಪತ್ನಿಯೂ ಅದೇ ರೀತಿಯಾಗಿ ಉಪಚಾರ ಮಾಡಲಾರಂಭಿಸಿದಳು. ಈ ವೈಶ್ಯವರನೂ ಗುಲಾಂಖಾನನ ಮನೆಯ ಒಳಗೆ ಹೋದನು

ಗುಲಾಂಖಾನನ ಮನೆಯಲ್ಲಿ ಅನರ್ಥವು ನಡೆದಿತ್ತು. ಆ ದಾಸಿಯರು ಕಾಲುಘಂಟೆಯ ವರೆಗೂ ಸೀತಾಂಬೆಯ ದಾರಿಯನ್ನು ನೋಡಿದರು. ಅಕೆಯು ಬರಲೇ ಇಲ್ಲ; ಇದೇನಿರಬಹುದೆಂದು ದಾಸಿಯರು ದೀಪ ತೆಗೆದುಕೊಂಡು ಹತ್ತಿರ ಬಂದರು, ಕೂಗಿದರು, ಮಾತಾಡಲಿಲ್ಲ. ಆಗ ಅವರು ಗಾಬರಿಯಾಗಿ ದೀಪ ತೆಗೆದುಕೊಂಡು ಒಳಕ್ಕೆ ಪ್ರವೇಶ ಮಾಡಿದರು. ಅಲ್ಲೂ ಇರಲಿಲ್ಲ. ಅಹಹ!!! ಅವರ ಮನಸ್ಸಿನಲ್ಲಿ ಹುಟ್ಟಿದ ಹೆದರಿಕೆಯನ್ನೆಷ್ಟು ಹೇಳಿದರೂ ತೀರದು. ಇನ್ನೇನು ಮಾಡುವರು! ಅವರು ಹಾಗೆಯೇ ಬಂದು ಜವಾನನ ಮುಂದೂ ಈ ವಿಚಾರ ತಿಳಿಸಿದರು ಅವನಿಗಂತೂ ಪ್ರಾಣವೇ ಹೋದಹಾಗಾಯಿತು. ಎಲ್ಲರೂ ಹೋಗಿ ಯಜಮಾನನ ಮುಂದೆ ನಡೆದ ಸಮಾಚಾರವನ್ನು ತಿಳಿಸಿದರು. ಆಗಿನ ಆ ಗುಲಾಂಖಾನನಲ್ಲುಂಟಾದ ವಿಕಾರವನ್ನೇನೆಂದು ಹೇಳಲಿ! ಲೋಕ ಸುಂದರಿಯಾದ ಸ್ತ್ರೀಯು ಕೈ ತಪ್ಪಿದಳಲ್ಲಾ? ಎಂಬ ದೊಡ್ಡ ಚಿಂತಾ ಸಮುದ್ರದಲ್ಲಿ ಆತನು ಮುಳುಗಿದನು. ಈ ಜವಾನನೇ ಮೊದಲಾದವರನ್ನು ಕಡಿದು ಹಾಕಲೋ ಎಂಬುವಷ್ಟು ಕೋಪ ಬೇರೆ. ಅನ್ಯಾಯವಾಗಿ ದ್ರವ್ಯ ವ್ಯಯವಾಯಿತಲ್ಲಾ; ಎಂಬ ದುಃಖ ಬೇರೆ. ಹೆಚ್ಚಿಗೆ ಹೇಳುವದೇನು? ಅವನು ಮಾಡಿದ ನೀಚ ಕೃತ್ಯಕ್ಕೆ ಇಲ್ಲಿಯೇ ಶಿಕ್ಷೆಯಾದಂತೆ ಆಯಿತು. ಆತನು ಆ ಇಬ್ಬರು ದಾಸಿಯರನೂ, ಜವಾನನನ್ನೂ ಮನೆಯ ಹೊರಗಿನ ಗಿಡಗಳಿಗೆ ಕಟ್ಟಿಸಿ ಹೊಡೆಯಲಾರಂಭಿಸಿದ್ದನು. ಅವರನ್ನು ದಂಡಿಸುವಾಗ ಮಧ್ಯೆ ಹಿಂದಿನ ನಡತೆಗಳನ್ನೆಲ್ಲಾ ಹಲುಬಿಕೊಳ್ಳುತ್ತಿದ್ದನು. ಅದನ್ನೆಲ್ಲಾ ಕೇಳಿ ವೈಶ್ಯವರನು ಬಹು ಆಶ್ಚರ್ಯಪಟ್ಟನು. ಸೀತಾಂಬೆಯು ಹೇಳಿದ ಮಾತುಗಳಲ್ಲಿ ಯಾವೂ ಸುಳ್ಳಿಲ್ಲವೆಂದು ಆತನಿಗೆ ನಿರ್ಧಾರವಾಯಿತು. ಆತನು ಅಲ್ಲಿಂದ ಮನೆಗೆ ಬಂದು, ನಡೆದ ಸಂಗತಿಯನ್ನು

ಹೆಂಡತಿಯು ಮುಂದೆ ವಿಸ್ತಾರವಾಗಿ ಹೇಳಿದನು ಆಗ ಸೀತಾಂಬೆಯು:— ಅಪ್ಪಾ; ವೈಶ್ಯವರನೇ, ನೀನೇ ನನಗೆ ತಂದೆ; ಈಕೆಯೇ ನನಗೆ ತಾಯಿ. ಅಂತಃಕರಣವಿಟ್ಟು ನಾಳೆ ಬೆಳಗ್ಗೆ ಜಾಗ್ರತೆಯಾಗಿ ತಲುಪುವಂತೆ ನನ್ನ ಗಂಡನಿಗೆ ವಿಸ್ತಾರವಾಗಿ ತಂತಿಯ ಮೂಲಕ ಈ ಎಲ್ಲಾ ವಿಷಯಗಳನ್ನು ತಿಳಿಸೆಂದಳು; ಮತ್ತು ತನ್ನ ಕೊರಳಲ್ಲಿದ್ದ ಅಡ್ಡಿಕೆಯನ್ನು ಖರ್ಚಿಗಾಗಿ ಬಿಚ್ಚಿಕೊಡಲುದ್ಯುಕ್ತಳಾದಳು. ಅದಕ್ಕೆ ವೈಶ್ಯವರನು "ಅಮ್ಮಾ, ಅಡ್ಡಿಕೆ ಬೇರೆ ಕೊಡಬೇಕೆ? ಇರಲಿ, ನಮಗೆ ಮಕ್ಕಳೇ ಇಲ್ಲ. ನೀನೇ ನಮ್ಮ ಮಗಳಮ್ಮಾ. ನಾನೇ ವಿಸ್ತಾರವಾಗಿ ಈ ವರ್ತಮಾನವನ್ನು ನಿನ್ನ ಗಂಡನಿಗೆ ತಿಳಿಸುತ್ತೇನೆ"ಂದನು. ಆಗಲೇ ವಿಳಾಸವನ್ನೂ ಕೇಳಿ ತಿಳಿದುಕೊಂಡನು. ಪುಣ್ಯೇಶನಗರವೆಂದು ಕೇಳಿ:—"ಅಮ್ಮಾ. ದೈವಾನುಕೂಲವು ಚನ್ನಾಗಿದೆ. ತಂತಿಯನ್ನು ಬೆಳಗ್ಗೆ ಆರುಘಂಟೆಗೆ ಕಳುಹಿಸಿದರೆ ಏಳು ಘಂಟೆಯೊಳಗೆ ಅಲ್ಲಿಗೆ ಹೋಗುತ್ತದೆ. ಆಗಲೇ ಹೊರಡುವ ಗಾಡಿಯಲ್ಲಿ ನಿನ್ನ ಪತಿಯು ಹೊರಟು ಮಧ್ಯಾಹ್ನದ ಒಂದು ಘಂಟೆಗೆ ಖಂಡಿತವಾಗಿ ಇಲ್ಲಿಗೆ ಬರುವನು" ಎಂದು ಸಮಾಧಾನ ಮಾಡಿದನು. ಆ ರಾತ್ರಿ ಈ ಯೋಚನೆಯಲ್ಲಿ ಅವರಲ್ಲೊಬ್ಬರಿಗೂ ನಿದ್ರೆ ಬರಲೇ ಇಲ್ಲ

ಅಷ್ಟರೊಳಗೆ "ನಿನ್ನೆ ಸಾಯಂಕಾಲದಲ್ಲಿ ದುಃಖಪಡುತ್ತಿದ್ದ ಪತಿವ್ರತೆಯು ಗತಿಯೇನಾಯಿತೋ ನೋಡಬೇಕೆಂಬಂತೆ ಸೂರ್ಯನು ಪೂರ್ವಾಚಲ ಶಿಖರವನ್ನು ಹತ್ತಿದನು. ಆಗ ವೈಶ್ಯವರನು ಎದ್ದು ಟಪ್ಪಾಲಾಫೀಸಿಗೆ ಹೋಗಿ "ಅರ್ಜೆಂಟ' ಎಂಬ ತಂತಿಯ ಮೂಲಕ ವರ್ತಮಾನ ಕಳುಹಿಸಿದನು. ಇಷ್ಟಾಗುವದರೊಳಗೆ ಮೂವತ್ತು ರೂಪಾಯಿಗಳು ಖರ್ಚಾದವು. ಅಲ್ಲಿಂದ ವೈಶ್ಯವರನು ಮನೆಗೆ ಬಂದು:—"ಅಮ್ಮಾ, ಸವಿಸ್ತರ ಸಮಾಚಾರವನ್ನು ತಿಳಿಸಿರುತ್ತೇನೆ. ನಿನ್ನ ಪತಿಯು ಖಂಡಿತ ಮಧ್ಯಾಹ್ನಕ್ಕೆ ಬರುವನು ಧೈರ್ಯವಾಗಿರು" ಎಂದು ಸಮಾಧಾನಗೊಳಿಸಿದನು ಸೀತಾಂಬೆಗೆ ತನ್ನ ಮಗು ಹೋಗಿದೆಯೋ? ಎಷ್ಟು ಅಳು

ತ್ತಿದೆಯೋ? ಅದರ ಗತಿಯೇನೋ? ಎಂಬ ದುಃಖವೊಂದು ಕಡೆ, ಪ್ರಾಣಪ್ರಿಯನು ಯಾವಾಗ ಬರುವನೋ ಎಂಬ ಚಿಂತೆಯೊಂದು ಕಡೆ; ಇವೆರಡೂ ಸೇರಿ ಬಹು ತಾಪವನ್ನುಂಟುಮಾಡುತ್ತಿದ್ದವು.

ಇತ್ತ ಪುಣ್ಯೇಶನಗರದಲ್ಲಿ ವರದಾಚಾರಿಯು ಸ್ಟೇಶನ್ನಿನ ಹತ್ತಿರಕ್ಕೆ ಬಂದಿದ್ದನು. ಆತನು ತಮ್ಮವರನ್ನು ಯಾರನ್ನೂ ಕಾಣಲೇ ಇಲ್ಲ. ಇದೇನು? ನಿನ್ನೆ ಎರಡು ಕಾಗದಗಳು ಬಂದಿವೆ. ಈ ದಿವಸ ಸ್ಟೇಶನ್ನಿನ ಬಳಿಯಲ್ಲಿ ಬಂದಿರಬೇಕೆಂದು ಬರೆದಿದ್ದರು. ಏನು ಕಾರಣದಿಂದ ಬಂದಿರಲಿಕ್ಕಿಲ್ಲವೆಂಬ ಯೋಚನೆ ಹುಟ್ಟಿತು.

ಹೀಗೆಯೇ ಯೋಚನೆ ಮಾಡುತ್ತ ಮನೆಗೆ ತೆರಳಿದನು. ಆ ದಿವಸ ವರದಾಚಾರಿಗೆ ಭೋಜನವೇ ಬೇಕಾಗಲಿಲ್ಲ. ಮನಸ್ಸಿನಲ್ಲಿ ಏನೋ ಚಿಂತಿಸುತ್ತ ಸಾಯಂಕಾಲದ ವರೆಗೂ ಕಾಲ ಕಳೆದನು. ಅಷ್ಟಾದರೂ ಯಾವ ವರ್ತಮಾನವೂ ಗೊತ್ತಾಗಲಿಲ್ಲ; ಮತ್ತೂ ಚಿಂತೆಯು ಹೆಚ್ಚಿತು ರಾತ್ರಿಯೆಲ್ಲಾ ನಿದ್ರೆಯೇ ಇಲ್ಲ ಅಗಾಧ ಯೋಚನೆಯಲ್ಲಿ ರಾತ್ರಿಯು ಕಳೆದು ಹೋಯಿತು. ಚಿಂತೆಯು ಮುಗಿಯಲಿಲ್ಲ; ಬೆಳಗಾಯಿತು. ಅಷ್ಟರಲ್ಲೇ ಪೋಸ್ಟ ಜವಾನನು ಒಂದು ಕಾಗದವನ್ನು ತಂದುಕೊಟ್ಟನು; ಅದನ್ನು ನೋಡಿ ವರದಾಚಾರಿಯು:—"ನಮ್ಮ ಮಾವನ ಅಕ್ಷರಗಳಾಗಿ ಕಾಣುತ್ತವೆ ಏನೋ ಕ್ಷೇಮಸಮಾಚಾರವಿರಬಹುದು" ಎಂದು ಯೋಚಿಸಿ ಓದಿ ನೋಡಿದನು. ಓದಿದೊಡನೆ ಆತನ ಎದೆಯೊಡೆಯಿತು. ಮೈ ನಡುಗಲಾರಂಭಿಸಿತು. ಕಣ್ಣು ಕೆಂಪೇರಿದವು. ಅಯ್ಯೋ!! ಇನ್ನೇನು ಗತಿ? ದಾರಿಯಲ್ಲಿ ನಮ್ಮ ಮಾವಂದಿರು ಕೆಳಗಿಳಿದಿದ್ದರಂತೆ, ಗಾಡಿ ಹತ್ತುವದರೊಳಗೇ ಅದು ಹೊರಟುಹೋಯಿತಂತೆ ಆ ಗಾಡಿಯಲ್ಲಿ ಎರಡು-ಮೂರು ಜನ ಪಠಾಣರಿದ್ದರಂತೆ! ಈ ಗಾಬರಿಯಿಂದ ತಮಗೆ ಜ್ವರ ಬಂದದ್ದರಿಂದ ಈ ದಿವಸ ಅಲ್ಲಿಯೇ ಇದ್ದು, ಸ್ವಲ್ಪ ಸುಧಾರಿಸಿಕೊಂಡು ಮಾವಂದಿರು ನಾಳೆ ಬರುತ್ತಾರಂತೆ ಎಲ್ಲಾ ವಿಷಯಕ್ಕೂ ದೇವರೇ

ನನ್ನನ್ನು ಕಾಪಾಡಬೇಕೆಂದು ಬರೆದಿರುವರು. ಇಲ್ಲಿಗಂತೂ ಬರಲಿಲ್ಲ. ಎಲ್ಲಿಗೆ ಹೋಗಿರಬಹುದು!! ಎಲ್ಲಿರುವಳೋ? ಎಷ್ಟು ಕಷ್ಟ ಪಡುವಳೋ? ಎಷ್ಟು ಹಂಬಲಿಸುವಳೋ? ಮಗು ಹೇಗಿರುವದೋ? ಇಂಥಾ ಅನಾಥಳನ್ನು ಭಕ್ತವತ್ಸಲನೇ, ಭಗವಂತನೇ, ನೀನೇ ರಕ್ಷಿಸಬೇಕು, ಎಂದು ವ್ಯಸನಪಡಲಾರಂಭಿಸಿದನು. ಇತ್ತ ಗುಲಾಂಖಾನನು ತನ್ನ ಮನೋರಾಜ್ಯವು ಭಂಗವಾಯಿತೆಂದು ಕೊರಗಲಾರಂಭಿಸಿದನು.

---

## ೫ನೆಯ ಪ್ರಕರಣ.

## ಸುಖಾನುಭವ.



ಹೀಗೆ ವರದಾಚಾರಿಯು ವ್ಯಸನಪಡುತ್ತಿರುವಷ್ಟರಲ್ಲಿ ತಂತೀಟಪಾಲಿನ ಜವಾನನು 'ವರದಾಚಾರ್ಯರ ಮನೆಯಾವದೆ'ಂದು ಕೇಳುತ್ತ ಓಡಿ ಬಂದನು. ಇದನ್ನು ಕೇಳಿ, ಯಾರವರೆಂದು ವರದಾಚಾರಿಯು ಹೊರಕ್ಕೆ ಬಂದನು. ಕೂಡಲೆ ಜವಾನನು:—"ನೀವೇನೋ ವರದಾಚಾರ್ಯರು? ಇಕೋ, ತಂತೀ ವರ್ತಮಾನ ಬಂದಿದೆ. ತೆಗೆದುಕೊಳ್ಳಿರಿ" ಎಂದು ಕೈಗೆ ಕಾಗದವನ್ನು ಕೊಟ್ಟನು. ವರದಾಚಾರಿಯು ಅದನ್ನು ಒಡೆಯುತ್ತ ಒಳಗೆ ಹೋಗಿ ಕುಳಿತು ಓದಲಾರಂಭಿಸಿದನು. ಆ ಕಾಗದ ಓದಿದೊಡನೆ ಸಂತೋಷ-ದುಃಖಗಳೆಂಬ ಸಮುದ್ರಗಳೆರಡೂ ಉಕ್ಕಿ ಆತನನ್ನು ಆವರಿಸಿದವು. ಇಂಥಾ ಕಷ್ಟದಿಂದ ಪಾರಾಗಿ, ಆ ಮಹಾರಾಯನಾದ ರಂಗಶೆಟ್ಟಿಯೆಂಬ ವೈಶ್ಯನ ಮನೆಯಲ್ಲಿ ಪ್ರಿಯಳಿರುವಳೆಂದು ತಿಳಿದು ಬಹು ಸಂತೋಷವಾಯಿತು. ಮಗು ಹೇಗಿದೆಯೋ? ಅವನ ಮನೆಯಲ್ಲಿ ಪ್ರಿಯೆಯು ಯಾವ ಯಾವ ಕಷ್ಟಗಳನ್ನನುಭೋಗಿಸಿದಳೋ? ಎಂದು ನೆನಿಸಿ ದುಃಖವೂ ಆಯಿತು. ಹೊರತು ಚಂಡಾಲನಾದ ಪಾಪನ ವಿಷಯದಲ್ಲಿ ಆ ವರದಾಚಾರಿಗೆ ಬಂದ ಕೋಪವು ಕಾಲಭೈರವನ ಕೋಪವನ್ನನುಸರಿಸುತ್ತಿತ್ತು.

ವರದಾಚಾರಿಯು ಕೂಡಲೆ ತನ್ನ ಕಡೆಯ ನಾಲ್ಕೈದು ಜನ ಸಿಪಾಯಿಗಳನ್ನು ಹಿಂದಿಟ್ಟುಕೊಂಡು, ರಾವಣಹನನಮಾಡುವ ಶ್ರೀರಾಮನು ಸುಗ್ರೀವಾದಿಗಳಿಂದ ಕೂಡಿ ಹೊರಟಂತೆ ವೇಗವಾಗಿ ಸ್ಟೇಶನ್ನಕ್ಕೆ ತೆರಳಿದನು. ದೈವಯೋಗದಿಂದ ಗಾಡಿ ಹೊಡುವ ಹೊತ್ತಿಗೆ ಸ್ವಲ್ಪ ಕಾಲವಿತ್ತು. ಇವರು ಜಾಗ್ರತೆ ಹೋಗಿ ಟಿಕೀಟು ತೆಗೆದುಕೊಂಡು ಗಾಡಿಯಲ್ಲೂ ಕುಳಿತರು ಆ ದುಷ್ಟ ಗುಲಾಂಖಾನನನ್ನೂ, ಗೋವಿಂದಾಚಾರಿಯನನ್ನೂ ಜಾಗ್ರತೆ ದಂಡಕ್ಕೆ ಗುರಿಮಾಡುವದಕ್ಕೋ ಎಂಬಂತೆ ಗಾಡಿಯು ಮನೋವೇಗವನ್ನನುಸರಿಸುತ್ತ ಹೊರಟಿತು.

ವರದಾಚಾರಿಯು ಯಾವಾಗ ಆ ಗ್ರಾಮವು ಬಂದೀತೆಂದು ನಿರೀಕ್ಷಿಸುತ್ತಿದ್ದನು ಹೆಚ್ಚು ಹೇಳಲೇನು! ನಾಲ್ಕು ಘಂಟೆಗಳ ಕಾಲವೆಂಬದು ಅವನಿಗೆ ನಾಲ್ಕು ಯುಗವಾಗಿ ಪರಿಣಮಿಸಿತು. ಬಹು ಕಾಲದಿಂದ ಪೂಜಿಸಲ್ಪಟ್ಟ ದೇವತು ಪ್ರತ್ಯಕ್ಷವಾಗುವಂತೆ ಕ್ಲಪ್ತಗ್ರಾಮವೂ ಬಂದಿತು. ಅಲ್ಲಿ ಗಾಡಿ ನಿಂತ ಕೂಡಲೆ ವರದಾಚಾರಿಯು ಜವಾನರೊಡನೆ ಕೆಳಗಿಳಿದನು. ಅಷ್ಟರಲ್ಲಿ ರಂಗಶೆಟ್ಟಿಯೂ ಸ್ಟೇಶನ್ನಿಗೆ ಬಂದಿದ್ದನು. ವರದಾಚಾರಿಯನ್ನು ನೋಡುತ್ತಲೆ, ಅವರ ಉಡುಪಿನ ಗುರ್ತಿನಿಂದಲೆ, ಇವರೇ ವರದಾಚಾರಿ ಎಂಬುವವರಿರಬಹುದೆಂದು ತಿಳಿದು, ವೈಶ್ಯವರನು ಸುಮ್ಮನಿರಲಾರದೆ:--"ಸ್ವಾಮಿ, ನೀವೇನೋ ವರದಾಚಾರ್ಯರೆ"ಂದು ಕೇಳಿದನು. ಅದಕ್ಕೆ ಆ ತರುಣನು:—"ನಿಜ, ಸ್ವಾಮಿ, ಈ ಊರಲ್ಲಿ ರಂಗಸೆಟ್ಟರ ಮನೆಯೆಲ್ಲಿ? ದಯವಿಟ್ಟು ಅದನ್ನು ತೋರಿಸುವಿರಾ" ಎಂದನು. ಅದಕ್ಕಾ ಶೆಟ್ಟಿಯು:—ಪ್ರಿಯಮಹಾಶಯರೇ, ನಾನೇ ರಂಗಶೆಟ್ಟಿಯು. ತಾವು ಈ ಗಾಡಿಯಲ್ಲಿ ಖಂಡಿತ ಬರುವಿರೆಂದು ತಿಳಿದೇ ನಾನು ಇಲ್ಲಿಗೆ ಬಂದೆನು. ಮನೆಗೆ ಹೋಗೋಣ ಬನ್ನಿ ಸ್ವಾಮಿ, ಎಂದನು. ಅದನ್ನು ಕೇಳಿ ವರದಾಚಾರಿಗೆ ಆನಂದವೂ, ದುಃಖವೂ ಉಕ್ಕಲಾರಂಭಿಸಿದವು. ಆತನು ಶೆಟ್ಟಿಯನ್ನಪ್ಪಿಕೊಂಡು:—"ಅಪ್ಪಾ, ನೀನು ನಮ್ಮಿಬ್ಬರಿಗೆ ಯಾವ ಜನ್ಮದ

ತಂದೆಯೋ? ನಮ್ಮ ಭಾಗದ ದೇವರನ್ನೇ ನೋಡಿದಂತಾಯಿತು ಪ್ರಿಯಳು ಕ್ಷೇಮವಾಗಿರುವಳೋ, ಮಗುವಿನ ಗತಿಯೇನಾಯಿತೆಂದು ಕಣ್ಣೀರು ಹಾಕಿದನು. ಹಾಗೆಯೇ ಸಮಾಧಾನ ಮಾಡಿಕೊಂಡು ಶೆಟ್ಟಿಯ ಮನೆಯ ಕಡೆಗೆ ತೆರಳಿದನು. ರಂಗಶೆಟ್ಟಿಯೂ ಯೋಗಕ್ಷೇಮವನ್ನೆಲ್ಲಾ ಹೇಳುತ್ತ ಮನೆಯ ಒಳಗೆ ಹೋಗಿ:—ಇದೇ ನಮ್ಮ ಮನೆ, ಒಳಗೆ ಬರಬೇಕೆಂದನು. ಆ ಮನೆಯನ್ನು ನೋಡಿ, ಲಕ್ಷ್ಮಿಗೆ ವಾಸಸ್ಥಾನವಾದ ಕಮಲವನ್ನು ನೋಡಿದರೆ, ಭಗವಂತನಿಗೆ ಎಷ್ಟು ಆನಂದವಾಗುವದೋ, ಅದರ ಇಮ್ಮಡಿಯಷ್ಟು ಆನಂದವು ವರದಾಚಾರಿಗೆ ಆಯಿತು. ಆತನು ಒಳಗೆ ಪ್ರವೇಶಿಸಿ, ಹಾಸಿ ಸಿದ್ಧಮಾಡಿದ್ದ ರತ್ನಗಂಬಳಿಯ ಮೇಲೆ ಕುಳಿತನು. ಪರಿವಾರದ ಜನರೂ ಬಂದು ನೆರೆದರು. ವರದಾಚಾರಿಯು ಹೆಂಡತಿಯನ್ನು ಕಾಣಲೇ ಇಲ್ಲ. ಬಹು ಕುತೂಹಲವೆಂದು ಬೇರೆ ಹೇಳಬೇಕೆ? ಅಷ್ಟರಲ್ಲಿಯೇ ರಂಗಶೆಟ್ಟಿಯು ಒಳಗೆ ಹೋಗಿ ಅಡಿಗೆಯ ಮನೆಯಲ್ಲಿ ಗೌಪ್ಯವಾಗಿ ಸಂರಕ್ಷಿತಳಾದ ಸೀತಾಂಬೆಯನ್ನು ನೋಡಿ:—"ಅಮ್ಮಾ ತಾಯಿ, ಇಕೋ, ನಿನ್ನ ಪ್ರಾಣಪ್ರಿಯನು ಸಪರಿವಾರವಾಗಿ ಬಂದಿರುವನು. ತಡವೇಕೆ? ಬಾರಮ್ಮ ನಮಸ್ಕಾರ ಮಾಡಿ, ನಿನ್ನ ಮುಖಚಂದ್ರನ ಕಿರಣಗಳಿಂದ ಪತಿಯ ನೇತ್ರಕುಮುದಗಳನ್ನು ಅರಳಿಸು. ಪತಿಯ ಮುಖವನ್ನು ನೋಡಿ ಧನ್ಯಳಾಗು. ಇಂದಿಗೆ ನೀನು ಧನ್ಯಳು, ನಾವೂ ಧನ್ಯರಮ್ಮಾ. ಪತಿವ್ರತಾಶಿರೋಮಣಿಯೇ, ನಿನ್ನ ಧರ್ಮವೇ ನಿನ್ನ ಪತಿಯನ್ನು ಕರೆದುಕೊಂಡು ಬಂದಿರುವದು" ಎಂದು ನುಡಿದನು. ಸೀತಾಂಬೆಯು ಮೊದಲು ಬಹು ಜನಗಳು ಒಳಗೆ ಬಂದದ್ದನ್ನು ನೋಡಿ, "ಇದೇನು, ಮತ್ತೆ ನನ್ನ ಮೃತ್ಯುವು ಇಲ್ಲಿಗೂ ಬಂತೇ? ಆ ದುರುಳನಿಗೆ ನಾನಿಲ್ಲಿರುವೆನೆಂದು ಯಾರು ಹೇಳಿದ್ದಾರು?" ಎಂದು ಗಾಬರಿಗೊಂಡಿದ್ದಳು.

ಗಾಬರಿಯಾಗಿದ್ದ ಸೀತಾಂಬೆಯು ಮೇಘದ ಧ್ವನಿಯಂತೆ ಗಂಭೀರವಾದ ಪತಿಯ ನುಡಿಗಳನ್ನಾಲಿಸಿ, "ಅಹಹಾ! ನನ್ನ ಪ್ರಾಣಪದಕವೇ

ಬಂದಿರುವಂತೆ ಕಾಣುತ್ತದೆ. ಸಂದೇಹವೇನು? ನನ್ನ ಹಿರಿಯರು ಮಾಡಿದ ಆಶೀರ್ವಚನಗಳೂ, ನನ್ನಲ್ಲಿಯ ಪತಿಯ ಅಂತಃಕರಣವೂ, ಭಗವಂತನ ಕೃಪೆಯೂ ಒಂದೇ ಸಲ ಫಲಿಸಿದಂತಾದವು. ಭಗವಂತನೇ, ನಿನಗೆ ಭಕ್ತ ವತ್ಸಲನೆಂಬ ಬಿರುದು ಸಲ್ಲತಕ್ಕದ್ದೇ ಸರಿ'' ಎಂದು ಮನಸ್ಸಿನಲ್ಲಿ ಸಂತೋಷ ಗೊಂಡಳು; ಮತ್ತು ಥಟ್ಟನೆ ಎದ್ದು, ಪತಿಗೆ ವಂದನೆ ಮಾಡಲು ಹೊರಗೆ ಬಂದಳು. ಏನು ಹೇಳೋಣ! ಮುಂದಿನ ಜನ್ಮದಲ್ಲಾದರೂ ನೋಡ ಬೇಕೆಂದಿದ್ದ ಪತಿಯ ಮುಖವನ್ನು, ಈ ಜನ್ಮದಲ್ಲೇ ಈಗಲೇ ನೋಡಿದೆ ನಲ್ಲವೆಂಬ ಸಂತೋಷ, ತನ್ನ ಮಹಾ ವಿಪತ್ತಿನ ಸ್ಮರಣೆಯಿಂದಾದ ದುಃಖ, ಇವುಗಳಿಂದ ನಾನು ಮುಂದು, ತಾನು ಮುಂದೆಂದು ಒಸರಲಾರಂಭಿಸಿದ ಆನಂದಬಾಷ್ಪಗಳನ್ನೂ, ದುಃಖಾಶ್ರುಗಳನ್ನೂ ಕಣ್ಣೆಂಬ ಪಾತ್ರೆಗಳಲ್ಲಿ ಧರಿಸಿ, ಆಕೆಯು ಪತಿಯ ಚರಣಕಮಲಗಳನ್ನು ತೊಳೆಯಲಾರಂಭಿಸಿದಳು. "ಓ! ಪತಿವ್ರತಾಶಿರೋಮಣಿಯೇ, ನೀನೇ ಧನ್ಯಳು. ಇಂಥಾ ಕಾಲ ದಲ್ಲೂ ಪತಿಸೇವೆಯನ್ನು ಬೇಜಾರಿಲ್ಲದೆ ಮಾಡುವೆಯಲ್ಲಾ!'' ಎಂದು ಬೇರೆ ಹೇಳಬೇಕೆ? ಇಂಥಾ ಗೃಹಿಣಿಯನ್ನು ನೋಡಿ, ವರದಾಚಾರಿಯೂ ತಡೆಯಲಾರದೆ ಕಣ್ಣೀರಿನ ಹನಿಗಳನ್ನು ಸುರಿಸಿದನು. ಅನಂತರ ಹೆಂಡತಿ ಯನ್ನು ಸಮಾಧಾನಪಡಿಸುವದಕ್ಕಾಗಿ ಆಕೆಯನ್ನು ತನ್ನ ಬಳಿಯಲ್ಲಿ ಕುಳ್ಳಿ ರಿಸಿಕೊಂಡು, ವಸ್ತ್ರದ ತುದಿಯಿಂದ ಕಣ್ಣೀರುಗಳನ್ನು ಒರಿಸುತ್ತಾ ಸಂತೈಸಿ ದನು. ಅಷ್ಟಾದರೂ ಸೀತಾಂಬೆಯು ಮಾತನಾಡಳು. ಅಯ್ಯೋ, ಪಾಪ!! ಇನ್ನು ಯಾರ ಮುಂದೆ ತನ್ನ ದುಃಖವನ್ನು ಹೇಳಿಕೊಂಡಾಳು? ಅನಂತರ ಬಹಳ ಹೊತ್ತಿನ ಮೇಲೆ ಅವಳು ಸ್ವಲ್ಪ ಸಮಾಧಾನ ಮಾಡಿಕೊಂಡಳು.

ವರದಾಚಾರಿಯೂ ಒಡನೆ ಗೋವಿಂದಾಚಾರಿಯ ಕ್ರೂರ ಕೃತ್ಯವನ್ನೂ, ಗುಲಾಂಖಾನನ ನೀಚತನವನ್ನೂ ಅಲ್ಲಿಯ ಇನಸ್ಪೆಕ್ಟರಿಗೆ ಫಿರ್ಯಾದಿ ಬರೆದು ಕಳುಹಿಸಿದ್ದನು. ಇಲ್ಲಿಯ ಅಧಿಕಾರಿಯು ಕೂಡಾ ಈತನೂ ಇನಸ್ಪೆಕ್ಟರನಿದ್ದಾನೆಂದು ತಿಳಿದು, ತಮ್ಮ ಸ್ನೇಹಿತನಂತೆ ಭಾವಿಸಿ

ಗುಲಾಂಖಾನನ ಮನೆಯು ಝಡತಿ ಮಾಡಿ, ಅವನನ್ನು ಸೆರೆಹಿಡಿಯಲು ಜಾಗ್ರತೆ ಸರಕಾರದ ಅಪ್ಪಣೆ ತೆಗೆದುಕೊಂಡು, ರಂಗಶೆಟ್ಟಿಯ ಮನೆಯ ಬಳಿಗೆ ಬಂದನು ರಂಗಶೆಟ್ಟಿಯು ಬಂದ ಅಧಿಕಾರಿಯನ್ನು ಗೌರವದಿಂದ ಕಂಡು ಒಳಗೆ ಕುಳ್ಳಿರಿಸಿದನು. ಇವರು ಬರುವದನ್ನು ತಿಳಿದು ಸೀತಾಂಬೆಯು ಒಳಗೆ ಮೊದಲೇ ಹೋಗಿದ್ದಳು. ಬಂದ ಅಧಿಕಾರಿಯೊಡನೆ ಸ್ವಲ್ಪಹೊತ್ತು ಮಾತನಾಡಿ, ಆ ಗುಲಾಂಖಾನನನ್ನು ಸೆರೆಹಿಡಿಯುವದಕ್ಕೂ, ಮುಖ್ಯವಾಗಿ ಆ ಮಗುವನ್ನು ಕಾಪಾಡುವದಕ್ಕೂ ವರದಾಚಾರಿಯು ಆ ಊರಿನ ಇನಸ್ಪೆಕ್ಟರ್ ಎಂಬ ಅಧಿಕಾರಿಯನ್ನು ಜೊತೆಯಲ್ಲಿಯೇ ಕರಕೊಂಡು ನಡೆದನು.

ಈ ವಿಚಾರ ಸ್ವಲ್ಪವಾದರೂ ಗುಲಾಂಖಾನನಿಗೆ ತಿಳಿಯದು. ರಾತ್ರಿ ಕಟ್ಟಿದ್ದ ಜನರನ್ನು ಮರದ ಬಳಿಯಲ್ಲಿ ಹಾಗೆಯೇ ನಿಲ್ಲಿಸಿದ್ದನು. ಒಳಗೆ ಬಹಳ ಸಂತಾಪ. ಊರಲ್ಲೆಲ್ಲಾ ತನ್ನ ಕಡೆಯ ಸಿಪಾಯಿಗಳನ್ನು ಕೊಟ್ಟು ಹುಡುಕಿಸಿದ್ದನು ಆದರೂ ಅವನ ಪ್ರಯತ್ನವು ನಿಷ್ಫಲವೇ ಆಯಿತು. ಆ ಮಗುವಿನ ಸಂಕಟ ಏನು ಹೇಳೋಣ! ಅದನ್ನು ಮಾತನಾಡಿಸುವವರೇ ದಿಕ್ಕಿಲ್ಲ. ಸುಮಾರು ರಾತ್ರಿ ಹತ್ತುಗಂಟೆಗೆ ಎದ್ದು ಅದು ಅಳಲಾರಂಭಿಸಿತು. ಆ ಕೂಸಿನ ಆರ್ತಧ್ವನಿಯನ್ನು ಕೇಳಲಾರದೆ, ಒಬ್ಬ ದಾಸಿಗೆ ಕರುಣೆ ಹುಟ್ಟಿ, ಯಜಮಾನನಿಗೆ ತಿಳಿಯದಂತೆ ಅಲ್ಲಿಗೆ ಬಂದು ಆಕೆಯು ಆಗಾಗ್ಗೆ ಅದಕ್ಕೆ ಸ್ತನ್ಯ ಕೊಡುತ್ತಿದ್ದಳು ಅದು ಸುಮಾರು ಒಂದು ವರ್ಷದ ವಯಸ್ಸಿನ ಮಗು. ಅಂಥ ಸ್ಥಿತಿಯಲ್ಲಿಯೂ ಒಮ್ಮೊಮ್ಮೆ ಆಡಲಾರಂಭಿಸುತ್ತಿತ್ತು, ಅಯ್ಯೋ!! ಈ ಮಗುವಿನ ಬಾಲಲೀಲೆಗಳನ್ನು ನೋಡಿ ಅಲ್ಲಿ ಯಾರು ಸಂತೋಷಪಡಬೇಕು? ಪ್ರತಿಯೊಂದು ಪ್ರಾಣಿಗೂ ಯಾವ ಕಾಲದಲ್ಲಿ ಯಾವ ಕಷ್ಟ ಬರುತ್ತದೆಯೋ ಗೊತ್ತಾಗುವದಿಲ್ಲ. ಇದರಂತೆಯೇ ಬೆಳಗಾಗುವ ವರೆಗೂ ಆ ದಾಸಿಯೇ ಮಗುವನ್ನು ಕಾಪಾಡಿದಳು. ನೋಡಿದಿರಾ! ದಾಸಿಯಾದರೂ ಅವಳಿಗೆ ಹುಟ್ಟಿದ ಪರೋಪಕಾರ ಬುದ್ಧಿ

ಯನ್ನು! ಇಷ್ಟರೊಳಗೆ ವರದಾಚಾರಿಯನ್ನು ಹಿಂದಿಟ್ಟುಕೊಂಡು, ಆ ಊರಿನ ಕೆಲವು ಪೋಲೀಸರನ್ನೂ ಸಹಾಯವಾಗಿ ತೆಗೆದುಕೊಂಡು ಬಂದು ಒಮ್ಮೆಂದೊಮ್ಮೆ ಮನೆಗೆ ಮುತ್ತಿಗೆ ಹಾಕಿದ ಅಧಿಕಾರಿಯನ್ನು ನೋಡಿ, ಗುಲಾಂಖಾನನು ಇದೇನೆಂದು ಕೇಳಿದನು. ಕೂಡಲೆ ಅಧಿಕಾರಿಯು ಇವು ನಿನಗೋಸ್ಕರ ತಂದಿರುವ ನೂತನವಾದ ಕಬ್ಬಿಣದ ಕಡಗಗಳೆಂದು ಹೇಳಿ, ಒಡನೆ ಅವನನ್ನು ಸೆರೆಹಿಡಿದನು. ಮರಕ್ಕೆ ಕಟ್ಟಿರುವವರನ್ನು ಬಿಚ್ಚಿಸಿ, ನಡೆದ ಸಂಗತಿಯನ್ನು ವಿಚಾರಿಸಿದನು. ಹಾಗೆಯೇ ಒಳಗೆ ಹೊಕ್ಕು, ಬಾಗಿಲಲ್ಲಿ ನಿಂತಿದ್ದ ದಾಸಿಯನ್ನು "ನಿನ್ನೆ ರಾತ್ರಿ ಒಬ್ಬ ಯುವತಿಯು ಇಲ್ಲಿದ್ದಳಂತಲ್ಲ? ಅವಳಿದ್ದ ಸ್ಥಳವೆಲ್ಲಿ?'' ಎಂದು ಕೇಳಿದನು. ಅವನು ತೋರಿಸಿದ ಕೊಠಡಿಗೆ ಹೋಗಿ, ಅಳುತ್ತಿದ್ದ ಮಗುವನ್ನು ಅಧಿಕಾರಿಯು ಬಹು ಪ್ರೀತಿಯಿಂದ ಎತ್ತಿ ಮುದ್ದಾಡಿದನು. ಅನಂತರ ಮಗುವನ್ನು ವರದಾಚಾರಿಯ ಕೈಗಿತ್ತು:—"ಓ ಸ್ವಾಮಿ, ಇಂಥಾ ಮಗುವನ್ನು ದೈವಯೋಗದಿಂದಲೇ ನೋಡಿದಂತಾಯಿತು.'' ಎಂದು ಅಭಿನಂದಿಸಿದನು. ಇದಲ್ಲದೆ ಅವರ ಒಡವೆ-ವಸ್ತ್ರಗಳ ಪಟ್ಟಿ ಬರೆದು ಕ್ರಮವಾಗಿ ಅವರ ಸ್ವಾಧೀನ ಮಾಡಿದನು. ಆ ಮೇಲೆ ಗುಲಾಂಖಾನನನ್ನು ಸೆರೆಯಲ್ಲಿಡುವಂತೆ ನಿಯಮಿಸಿದನು

ಇದಾದ ಮೇಲೆ ಆ ಗೋವಿಂದಾಚಾರಿಯನ್ನೂ ಹಿಡಿಯಬೇಕೆಂದು ಕೂಡಲೆ ಪೋಲೀಸರಿಗೆ ಅವನ ಚಹರೆಗಳನ್ನು ತಿಳಿಸಿ, ಎಲ್ಲ ಕಡೆಗೂ ಕಳುಹಿದರು. ಆಗ್ಗೆ ವರದಾಚಾರಿಯು:—"ಅವನು ಬಹುಶಃ ಪುಣ್ಯೋಶನಗರದ ಕಡೆಗೆ ಪ್ರಯಾಣ ಮಾಡುವವನಂತೆ ತೋರುತ್ತಾನೆ,'' ಎಂದನು. ಅದು ಹೇಗೆಂದು ಅಧಿಕಾರಿಯು ವಿಚಾರಿಸಲು, ತನಗೆ ಆ ಮನುಷ್ಯನು ಬರೆದಿದ್ದ ಕಾಗದವನ್ನು ಅಧಿಕಾರಿಗೆ ತೋರಿಸಿದನು. ಅದನ್ನು ನೋಡಿ ಓಹೋ! ನಿಶ್ಚಯವಾಗಿ ನಿಮ್ಮ ಕಡೆಗೇ ಹೋಗಿದ್ದಾನೆ. ನೋಡಿದಿರಾ, ಅವನ ಠಂಬಕತನವನ್ನು! ತಾವೇ ಮಗಳನ್ನು ಇಲ್ಲಿ ಮಾರಿ, ಅಪರಾಧವು

ಮಗಳ ಮೇಲೇ ಹೊರಲೆಂದು ಎಷ್ಟು ತಗಲುತನ ಮಾಡಿದ್ದಾನಲ್ಲ! ಇರಲಿ, ಎಂದು ಕೂಡಲೆ ಪುಣ್ಯೇಶನಗರಕ್ಕೆ ತೆರಳಿರೆಂದು ಮೂರು ಜನ ಪೋಲೀಸರಿಗೆ ಅಪ್ಪಣೆ ಮಾಡಿದನು.

ವರದಾಚಾರಿಯು ಬಹು ಸಂತೋಷದಿಂದ ಮಗುವನ್ನೆತ್ತಿಕೊಂಡು ಸೀತಾಂಬೆ ಇದ್ದ ಮನೆಗೆ ಬಂದನು. ಮಧ್ಯಾಹ್ನದ ಎರಡು ಗಂಟೆಯಾದರೂ ಯಾರಿಗೂ ಊಟವೇ ಇಲ್ಲ. ಎಲ್ಲರೂ ಊಟಕ್ಕೆ ತೆರಳಿದರು. ಪತಿಯು ಕೈಯಲ್ಲಿರುವ ಮಗುವನ್ನು ನೋಡಿ, ಸೀತಾಂಬೆಯು ಹಿಗ್ಗಿ ತೀರದು. ಸಂತೋಷಕ್ಕೆ ಪಾರವೇ ಇಲ್ಲ ಆ ದಂಪತಿಗಳಿಗೆ ಮಗುವನ್ನು ನೋಡಿದೊಡನೆ ಮೃಷ್ಟಾನ್ನ ಭೋಜನ ಮಾಡಿದ ಸಂತೋಷವು ತೃಣದಂತೆ ತೋರಿತು. ವರದಾಚಾರಿಯು ಅಲ್ಲಿ ನಡೆದ ವಿಷಯಗಳನ್ನೆಲ್ಲ ಹೇಳಿ ಹೆಂಡತಿಯನ್ನು ಸಂತೋಷಗೊಳಿಸಿದನು ರಂಗಶೆಟ್ಟಿಗಂತೂ ಇದನ್ನೆಲ್ಲ ಕೇಳಿ ಬಹು ಸಂತೋಷ ಅಷ್ಟರಲ್ಲಿ ಆ ದೊಡ್ಡ ಮನಸ್ಸಿನ ಶೆಟ್ಟಿಯ ಹೆಂಡತಿಯು ಒಬ್ಬ ಬ್ರಾಹ್ಮಣನಿಂದ ತಮ್ಮ ಮನೆಯಲ್ಲಿ ಬೇರೆ ಅಡಿಗೆ ಮಾಡಿಸಿಯೇ ಇದ್ದಳು ಅಷ್ಟರೊಡನೆ ಇವರೆಲ್ಲ ಭೋಜನ ಮಾಡಿದರು. ರಂಗಶೆಟ್ಟಿಯೂ ಅವರ ಭೋಜನವಾದ ಮೇಲೆ ಭೋಜನ ಮಾಡಿ, ಎಲ್ಲರೊಡನೆ ತಾಂಬೂಲವನ್ನು ಸವಿಯುತ್ತ ಕುಳಿತಿದ್ದನು. ಅಷ್ಟರೊಳಗೆ ಪೋಲೀಸರಲ್ಲೊಬ್ಬನು ಬಂದು "ಸ್ವಾಮಿೞ ತಮ್ಮನ್ನು ನಮ್ಮ ಇನಸ್ಪೇಕ್ಟರರು ನೋಡಬೇಕೆಂದದ್ದಾರೆ, ದಯುಮಾಡಿಸಬೇಕು" ಎಂದನು.

## ಉಪಸಂಹಾರ.

ವರದಾಚಾರಿಯು ಅದೇನೋ ತಿಳಿಯಬೇಕೆಂದು, ಕೂಡಲೆ ಹೊರಟನು. ಅಷ್ಟರಲ್ಲಿ ಇನಸ್ಪೆಕ್ಟರರೂ ಇತ್ತ ಕಡೆಗೇ ಬರುತ್ತಿದ್ದರು. ಅಧಿಕಾರಿಯು "ವರದಾಚಾರ್ಯರೆ, ನೋಡಿದಿರಾ, ನೀವು ಹೇಳಿದಂತೆ ನಿಮ್ಮ ಮಾವನೂ ರೈಲಿನಲ್ಲೇ ಪತ್ತೆಯಾದನು. ಪುಣ್ಯೇಶನಗರಕ್ಕೆ ಹೋಗುತ್ತಿದ್ದನಂತೆ. ಇಕೋ, ಇಲ್ಲಿ ಜೈಲಿನಲ್ಲಿರುವನು. ಬೇಕಾದರೆ ನೋಡಬಹುದೆ"ಂದನು. ವರದಾಚಾರಿಯು:—ಆ ಕಟಕನ, ಮುಖವನ್ನು ನೋಡಬಹುದೇ? ಕೃತಘ್ನ, ನಾವು ಅವನ ಹೆಸರೇ ಹೇಳಬಾರದು. ಮುಂದೆ

ಕ್ರಮವಾಗಿ ವಿಚಾರ ನಡೆಯಲಿ. ಸದ್ಯಕ್ಕೆ ನಾನು ರಜಾ ತೆಗೆದುಕೊಂಡು ಬಂದಿಲ್ಲ. ನಾಳೆ ಬೆಳಿಗ್ಗೆ ಅಲ್ಲಿಗೆ ಹಾಜರಾಗಬೇಕು ಅಪ್ಪಣೆಯಾದರೆ ರಾತ್ರಿಯ ಗಾಡಿಯಲ್ಲಿ ಹೊರಡುವೆನೆಂದನು. ಹೀಗೆಯೇ ಸ್ವಲ್ಪಹೊತ್ತು ಮಾತನಾಡಿ ಅಧಿಕಾರಿಯು ಬರುವೆನೆಂದು ನಮಸ್ಕರಿಸಿ ಹಿಂತಿರುಗಿದನು. ಅಲ್ಲಿಂದ ವರದಾಚಾರಿಯು ಮನೆಗೆ ಬಂದು ನಿಮ್ಮ ಚಿಕ್ಕಪ್ಪನೂ ಸಿಕ್ಕಿರುವನೆಂದು ಹೆಂಡತಿಗೆ ಹೇಳಿದನು. ಸೀತಾಂಬೆಯು ಕಿವಿ ಮುಚ್ಚಿಕೊಂಡು "ಏನು! ಹರಿಹರಿ!! ಅವನನ್ನು ನನ್ನ ಚಿಕ್ಕಪ್ಪನೆನ್ನುವಿರಾ! ಅವನಲ್ಲ; ಇಕೋ, ಈತನೇ ನನ್ನ ಚಿಕ್ಕಪ್ಪನೆಂದು ರಂಗಶೆಟ್ಟಿಯನ್ನು ತೋರಿಸಿದಳು. ಸಾಯಂಕಾಲದ ಊಟ ಮಾಡಿಕೊಂಡು, ಅವರು ಪುಣ್ಯೇಶನಗರಕ್ಕೆ ಹೊರಟರು.

ರಂಗಶೆಟ್ಟಿಯು:—"ಇನ್ನೂ ಎರಡು ದಿವಸ ಇಲ್ಲಿಯೇ ಇದ್ದು ಹೋಗಬೇಕೆ"ಂದನು ಅದಕ್ಕೆ ವರದಾಚಾರಿಯು:—ತನಗೆ ರಜಾ ಇಲ್ಲವೆಂದು ಸಮಾಧಾನ ಮಾಡಿ, ವೈಶ್ಯನ ಅಪ್ಪಣೆ ತೆಗೆದುಕೊಂಡು ಹೊರಟನು ಆಗ್ಗೆ ಸೀತಾಂಬೆಯು ರಂಗಶೆಟ್ಟಿಗೂ ಅವನ ಕುಟುಂಬಕ್ಕೂ ನವ ಸ್ಕಾರ ಮಾಡಿ, ವಾಗಿವನೆತ್ತಿಕೊಂಡು ಪತಿಯು ಹಿಂದೆ ತೆರಳಿದಳು ತಂದೆಯ ಮನೆಯಿಂದ ಹೊರಡುವದಕ್ಕಿಂತಲೂ, ಈ ವೈಶ್ಯನ ಮನೆಯಿಂದ ಹೊರಡುವದು ಸೀತಾಂಬೆಗೆ ಬಹು ದುಃಖಕರವಾಗಿ ತೋರಿತು. ಆ ವೈಶ್ಯದಂಪತಿಗಳಿಗೆ ಮಕ್ಕಳಿಲ್ಲದಿದ್ದರೂ ಹೆಣ್ಣುಮಕ್ಕಳನ್ನು ಮೊದಲನೇ ಸಲ ಗಂಡನ ಮನೆಗೆ ಕಳಿಹಿಸಬೇಕಾದರೆ ತಾಯಿ-ತಂದೆಗಳು ಎಷ್ಟು ದುಃಖಪಡುವರೋ, ಅದರ ಎರಡಷ್ಟು ದುಃಖವನ್ನನುಭವಿಸಿದರು ಸ್ನೇಹವೊಂದು ಅಂಥಾದ್ದಲ್ಲವೇ?

ರೈಲು ಬರುವ ಹೊತ್ತಾಯಿತು. ವರದಾಚಾರಿಯು ತನ್ನ ಪರಿವಾರವನ್ನು ತಿಕೀಟು ತೆಗೆದುಕೊಳ್ಳುವ ಬಗ್ಗೆ ಮೊದಲೇ ಕಳುಹಿಸಿದ್ದನು. ತಾನೂ ಪತ್ನೀಪುತ್ರರೊಡನೆ ಬಂಡಿಯಲ್ಲಿ ಕುಳಿತು, ಎಲ್ಲರ ಅಪ್ಪಣೆಯನ್ನೂ ಪಡೆದು, ವೇಗವಾಗಿ ಸ್ಟೇಶನ್ನಿಗೆ ಸಾಗಿದನು. ಅಷ್ಟರಲ್ಲಿ ಗಾಡಿಯೂ ಬಂತು. ಅವರು ಸಿದ್ಧವಾಗಿದ್ದ ಎರಡನೇ ತರಗತಿಯ ಗಾಡಿಯಲ್ಲಿ ಕುಳಿತರು. ಮಿಕ್ಕವರೆಲ್ಲ ಮೂರನೇ ತರಗತಿಯ ಗಾಡಿಯಲ್ಲಿ ಕುಳಿತರು; ಮೊನ್ನಿನ ದಿವಸ ಯಾವ ಗಾಡಿಯಲ್ಲಿ ಕುಳಿತುಕೊಳ್ಳುವದು ನರಕದಲ್ಲಿ ನಿಂತಂತೆ ಇತ್ತೋ, ಅದೇ ಗಾಡಿಯಲ್ಲಿ ಕುಳಿತುಕೊಳ್ಳೋಣವು ಈ ದಿವಸ

ಸೀತಾಂಬೆಗೆ ಸ್ವರ್ಗಸುಖವನ್ನನುಭವಿಸಿದಂತೆ ಪರಮಾನಂದಕರವಾಯಿತು. ಹೀಗೆಯೇ ವಿಲಾಸವಾಗಿ ಮಾತನಾಡುತ್ತ ಆ ದಂಪತಿಗಳು ಪ್ರಯಾಣ ಮಾಡಿದರು.

ಇತ್ತಲಾ ವಂಚಕರಾದ ಗುಲಾಂಖಾನನೂ, ಗೋವಿಂದಾಚಾರಿಯೂ ನ್ಯಾಯಾಧಿಪತಿಯ ಬಳಿಗೆ ಕಳುಹಿಸಲ್ಪಟ್ಟರು. ಅಲ್ಲಿ ಅವರ ವಿಚಾರಣೆಯ ಕಾಲದಲ್ಲಿ ಆ ವೈಶ್ಯ ದಂಪತಿಗಳೂ, ಈ ಬ್ರಾಹ್ಮಣ ದಂಪತಿಗಳೂ, ದಾಸಿಯರೇ ಮೊದಲಾದ ವಿಚಾರಣೆಗೆ ಬೇಕಾದ ಸಮಸ್ತರೂ ಕರೆಸಲ್ಪಟ್ಟಿದ್ದರು "ಅಂಗೈ ಹೋಲಿನ ಹುಣ್ಣಿಗೆ ಕನ್ನಡಿ ಬೇರೆ ಬೇಕೆ?" ಎಂಬ ನಾಣ್ಣುಡಿಯಂತೆ ಪ್ರತ್ಯಕ್ಷವಾದ ಘಾತುಕ ಕೃತ್ಯಕ್ಕೆ ವಿಚಾರಣೆ ಏನೂ ಬಹಳವಾಗಲೇ ಇಲ್ಲ ಇವರಿಬ್ಬರು ಅಪರಾಧಿಗಳನ್ನು ವಿಚಾರಿಸಿದರು ಮನಃಪೂರ್ವಕವಮಾಡಿದ ಕೆಲಸಕ್ಕೆ ಹೇಳ್ಯಾರೇನು? ಮಂಗಗಳಂತೆ ನಿಂತರು. ಕ್ರಮವಾಗಿ ಗೋವಿಂದಾಚಾರ್ಯನು ಬರೆದ ಕಾಗದವೂ ಹಾಜರಮಾಡಲ್ಪಟ್ಟಿತು. ಅದನ್ನು ನೋಡಿ, ನ್ಯಾಯಾಧಿಕಾರಿಗೆ ಬಹು ಕೋಪ ಬಂತು. ಗೋವಿಂದಾಚಾರಿಯನ್ನು ನೋಡಿ, "ಏನಯ್ಯಾ? ಛೀ, ಛೀ, ನಿನ್ನ ಮುಖವನ್ನೇ ನೋಡಬಾರದು. ನೀನು ಆಚಾರಿಯಲ್ಲ, ಶುದ್ಧ ಅನಾಚಾರಿಯಾಗಿದ್ದೀಯೆ" ಎಂದನು. ಗುಲಾಂಖಾನನು ಕೊಂಡದ್ದು ನಿಜವೆಂದು ಒಪ್ಪಿಕೊಂಡನು. ಹೆಚ್ಚಾಗಿ ಹೇಳಿ ಪ್ರಯೋಜನವೇನು? "ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಜನಗಳು ನೋಡುವದಿಲ್ಲವೆ?" ಎಂಬ ನಾಣ್ಣುಡಿಗೆ ಸರಿಯಾಯಿತು. ಅನಂತರ ನ್ಯಾಯಾಧಿಪತಿಯು ಸೀತಾಂಬೆಯನ್ನು ಕರೆದು "ಅಮ್ಮಾ, ನಿಮ್ಮ ಚಿಕ್ಕಪ್ಪನು ಮಾಡಿದ ಅಪರಾಧವಂತು ಸರಿಯಷ್ಟೆ, ಇವನಿಗೇನು ಶಿಕ್ಷೆ ಮಾಡಬೇಕು?" ಎಂದನು. ಸೀತಾಂಬೆಯು ಬಹು ಮರ್ಯಾದೆಯುಳ್ಳವಳೆಂದು ಚರಿತ್ರೆಯಿಂದಲೇ ವಿದಿತವಾಗುವದು. ಆದರೂ ನ್ಯಾಯಾಧಿಪತಿಯನ್ನು ತಂದೆಯಂತೆ ಭಾವಿಸಿ, "ಜನಾಬ್ಜೆಯವರೇ, ಇವನು ನನ್ನ ಚಿಕ್ಕಪ್ಪನೆನ್ನುವಿರಾ? ಸರ್ವಥಾ ಇವನಲ್ಲ. ಇಕೋ, ಮಹನೀಯನಾದ ನಮ್ಮ ಚಿಕ್ಕಪ್ಪನಿಲ್ಲಿರುವನೆ"ಂದು ರಂಗಶೆಟ್ಟಿಯನ್ನು ತೋರಿಸಿದಳು. "ಇವನ ತಪ್ಪಿಗೆ ಶಿಕ್ಷೆಯೇನೆಂದು ಕೇಳೋಣವಾಯಿತಲ್ಲ! ಅದನ್ನು ನಾನು ಏನು ಹೇಳಲಿ? ಜಗತ್ತಿನ ಜನಗಳನ್ನೆಲ್ಲ ದಂಡಿಸುವ ಯಮನಿಗೂ ಸಂದೇಹ ಬಿದ್ದಿರಬಹುದಲ್ಲವೆ" ಎಂದಳು, ನ್ಯಾಯಾಧಿಪತಿಯು ಬಹು ಭಾವಗರ್ಭಿತ